# ಬಾಲ ರಾಮಾಯಣ

## ಬಾಲಕಾಂಡ, ಅಯೋಧ್ಯಾಕಾಂಡ



# ಬಾಲ ರಾಮಾಯಣ

[ ಬಾಲಕಾಂಡ–ಅಯೋಧ್ಯಾಕಾಂಡ ]

ಲೇಖಕ :

ನಾರಾಯಣರಾವ ತಾಳಿಕೋಟಿ

ರಾಯಚೂರು.

ಪ್ರಕಾಶಕರು :

ಶ್ರೀರಾಮ ಸೇವಾಟ್ರಸ್ಟ್, ರಾಯಚೂರು

ಧಾರ್ಮಿಕ ಗ್ರಂಥ ಪ್ರಕಾಶನ ವಿಭಾಗ.

ಶ್ರೀರಾಮ ಸೇವಾ ಟ್ರಸ್ಟಿನ
ದ್ವಿತೀಯ ಕುಸುಮ

ಪ್ರಥಮ ಮುದ್ರಣ ೧೯೭೭
( ೧೦೦೦ ಪ್ರತಿಗಳು )



ಬೆಲೆ : ರೂ. ೬-೦೦

ಮುಖಪುಟ : ಶ್ರೀ. ಜಿ. ಕೆ. ಮೂರ್ತಿ, ಧಾರವಾಡ

ಪ್ರಕಾಶಕರು : ಶ್ರೀರಾಮ ಸೇವಾಟ್ರಸ್ಟ್, ರಾಯಚೂರು
( ಧರ್ಮ ಗ್ರಂಥ ಪ್ರಕಾಶನ ವಿಭಾಗ )
ಮುದ್ರಕರು : ಪ್ರತಿಭಾ ಮುದ್ರಣ, ಧಾರವಾಡ.

ಮಾನವಸಹಜದ ದೋಷಗಳನ್ನಿಟ್ಟೂ ಪ್ರಪಂಚದ ಆದರ್ಶ ವ್ಯಕ್ತಿಗಳನ್ನು
ಚಿತ್ರಿಸಿದ ವಿಶ್ವದ ಅಮರ ಹಾಗು ಆದಿಕವಿಯಾದ

# ಮಹರ್ಷಿ ವಾಲ್ಮೀಕಿಯ

ಅಮರ ಸ್ಮೃತಿಗೆ

**ಸ ಮ ರ್ಪ ಣೆ**



ಶ್ರೀ ಕೃಷ್ಣಪ್ಪ ಬಿ. ಶಿಂಧೆ

ಜನನ : 1873 A. D. ಮರಣ : 14-7-1948

# ಪ್ರಕಾಶಕರ ನುಡಿ

ಆದಿಕವಿ ವಾಲ್ಮೀಕಿ ಮಹರ್ಷಿಗಳ ರಾಮಾಯಣವು ಭಾರತೀಯರ ಜೀವನದ ಒಂದು ಭಾಗವಾಗಿದೆ. ಸಹೃದಯ ಓದುಗರ ಹೃನ್ಮನಗಳನ್ನು ತಣಿಸಿದೆ. ಭಾರತೀಯ ಸಂಸ್ಕೃತಿಗೆ ಕನ್ನಡಿಯನ್ನು ಹಿಡಿದು ಭಾರತದ ಹಿರಿಮೆಯನ್ನು ತೋರಿಸಿದೆ. ಆದರೆ ಸಂಸ್ಕೃತವನ್ನು ಒಲ್ಲ ಪಂಡಿತರಿಗೆ ಮಾತ್ರ ಅದನ್ನು ಓದಲು ಅನುಕೂಲವಾಯಿತು.

ಕನ್ನಡಿಗರಿಗೂ ಈ ಮಹಾಕವಿಯ ದರ್ಶನವಾಗಬೇಕೆಂಬ ಇಚ್ಛೆ-ಯಿಂದ ಕನ್ನಡದ ಕವಿಗಳು ಅನೇಕರು ರಾಮಾಯಣಗಳನ್ನು ರಚಿಸಿದರು. ತಮಗೆ ಯೋಗ್ಯ ಕಂಡ ರೀತಿಯಲ್ಲಿ ಮಾರ್ಪಾಟುಗಳನ್ನು ಮಾಡಿಕೊಂಡರು. ಇವೂ ಕೂಡ ಸಾಮಾನ್ಯ ಕನ್ನಡಿಗನಿಗೆ ಅರ್ಥವಾಗದಷ್ಟು ಕ್ಲಿಷ್ಟವಾಗಿವೆ.

ಜನಸಾಮಾನ್ಯರಿಗೆ ವಿಶೇಷವಾಗಿ ಬಾಲ-ಬಾಲಕಿಯರಿಗೆ ತಾವೇ ಓದಿಕೊಂಡು ಹಾಡಲು ಅನುಕೂಲವಾಗಲೆಂದು ಶ್ರೀ ನಾರಾಯಣರಾವ ತಾಳೀಕೋಟಿ ಇವರು ಪ್ರಸ್ತುತ ಬಾಲರಾಮಾಯಣವನ್ನು ಆದಿಕವಿಯ ಮಾರ್ಗವನ್ನೇ ಹಿಡಿದು ಸ್ವತಂತ್ರವಾದ ಕೃತಿಯನ್ನು ರಚಿಸಿದ್ದಾರೆ. ಸುಲ-ಲಿತವಾದ ಸರಲ ಭಾಷೆಯಲ್ಲಿ ಬರೆದ ಚತುಷ್ಪದಿಗಳು ಸಾಮಾನ್ಯನಿಗೂ ರಾಮಾಯಣದ ಸಾರಸರ್ವಸ್ವವನ್ನು ನೀಡಬಲ್ಲವು.

ಈ ಲೇಖಕರ ಕನ್ನಡ " ಶ್ರೀ ಭಗವದ್ಗೀತೆ "ಯು ಪ್ರಪ್ರಥಮವಾಗಿ ನಮ್ಮ ಪ್ರಕಾಶನ ವಿಭಾಗದಿಂದ ಈಗಾಗಲೇ ಪ್ರಕಾಶಿತವಾಗಿದೆ. ಅದಕ್ಕೆ ಎಲ್ಲ ಕಡೆಯಿಂದಲೂ ಒಳ್ಳೆಯ ಪ್ರತಿಕ್ರಿಯೆ ಬಂದಿದೆ. ಕೆಲವು ಅಭಿಪ್ರಾಯ ಗಳನ್ನು ಇದೇ ಸಂಪುಟದಲ್ಲಿ ಬೇರೆಡೆಗೆ ಕೊಡಲಾಗಿದೆ. ಕೆಲವು ಅಭಿಪ್ರಾಯ-ಗಳನ್ನು ಎರಡನೇ ಸಂಪುಟದಲ್ಲಿ ಕೊಡಲಾಗುವುದು.

ಬಾಲರಾಮಾಯಣದ ಈ ಪ್ರಥಮ ಸಂಪುಟಕ್ಕಾಗಿ ಹಾಗೂ ದ್ವಿತೀಯ ಸಂಪುಟಕ್ಕಾಗಿ ತಮ್ಮ ತಂದೆ-ತಾಯಿಯವರ ಸ್ಮರಣಾರ್ಥವಾಗಿ ಉದಾರ

ದೇಣಿಗೆಯನ್ನಿತ್ತ ಮಹಾದಾನಿಗಳಾದ ಶ್ರೀ ಮಲ್ಲಪ್ಪ ಶಿಂಧೆಯವರಿಗೂ ಅವರ ಬಂಧುಗಳಿಗೂ ಅಲ್ಲದೆ ನಮಗೆ ಪ್ರಕಟಿಸಲು ಅವಕಾಶ ಇತ್ತುದಕ್ಕಾಗಿ ಲೇಖಕರಾದ ಶ್ರೀ ನಾರಾಯಣರಾವ ತಾಳೀಕೋಟೆ ಇವರಿಗೂ ನಮ್ಮ ಕೃತಜ್ಞತೆಗಳು. ಧಾರವಾಡದ ಪ್ರತಿಭಾ ಮುದ್ರಣಾಲಯದ ಒಡೆಯರಾದ ಶ್ರೀ ಘಾಣೇಕರರಿಗೂ ಧನ್ಯವಾದಗಳು.

ಬಾಲರಾಮಾಯಣದ ಎರಡನೆಯ ಸಂಪುಟವೂ ಕ್ಷಿಪ್ರದಲ್ಲಿಯೇ ಹೊರಬೀಳುವದು. ಆರ್ಥಿಕ ಅನುಕೂಲವಾದರೆ ಮೂರನೆಯ ಭಾಗವೂ ಈ ವರ್ಷದ ಕೊನೆಯ ಒಳಗಾಗಿ ಪ್ರಕಟವಾಗಬಹುದು.

ಎಂದಿನಂತೆ ಓದುಗರ, ಭಕ್ತರ, ಪ್ರೋತ್ಸಾಹವೇ ನಮ್ಮ ಬಲ. ನಮ್ಮ ಸೇವೆಯು ಅವರಿಗೆ ಮೀಸಲು. ಭಗವಂತನು ಎಲ್ಲರಿಗೂ ಕಲ್ಯಾಣ ಮಾಡಲಿ.

ಡಾ. ಎ. ಶಂಕರ
ಎಸ್. ಜಿ. ಲೋಖಂಡೆ, ಎಂಜಿನಿಯರ
ನಾರಾಯಣರಾವ ತಾಳೀಕೋಟೆ, ಎಡ್ವೋಕೇಟ
ಧರ್ಮದರ್ಶಿಗಳು
ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು

ರಾಯಚೂರು
ತಾ. ೧೪-೧-೧೯೭೭
ಮಕರ ಸಂಕ್ರಮಣ

# ಲೇಖಕರ ನುಡಿ

ವಿಶ್ವದ ಆದಿಕವಿ ವಾಲ್ಮೀಕಿ ಮಹರ್ಷಿಯ ರಾಮಾಯಣ ಸಂತತ-ಹರಿಯುವ ಅಮೃತಮಯ ಗಂಗಾಜಲ. ಅದನ್ನು ಎಷ್ಟೋ ಕವಿಗಳು ತಮ್ಮ ಯೋಗ್ಯತಾನುಸಾರ ಕುಡಿದಿದ್ದಾರೆ. ಇತರರಿಗೆ ಕುಡಿಸಿದ್ದಾರೆ. ನಾನೂ ನನ್ನ ಬೊಗಸೆಯಲ್ಲಿ ತುಂಬಿಕೊಂಡು ಕುಡಿದಿದ್ದೇನೆ. ತೃಪ್ತಿಪಟ್ಟಿದ್ದೇನೆ. ಸಂಸ್ಕೃತ ಅರಿಯದ ಮಕ್ಕಳಿಗೆ ಕುಡಿಸುವ ಪ್ರಯತ್ನಪಟ್ಟಿದ್ದೇನೆ. ಮಕ್ಕಳಿಗೆ ತೃಪ್ತಿಯಾದೀತೆಂದು ನಂಬಿದ್ದೇನೆ. ಇದು ಅನುವಾದವಲ್ಲ. ಸ್ವತಂತ್ರ ಕೃತಿ.

ಈಗ ಐದು ತಿಂಗಳ ಹಿಂದೆ ನನ್ನ 'ಶ್ರೀ ಭಗವದ್ಗೀತೆ' ಯು ಶ್ರೀರಾಮ ಸೇವಾಟ್ರಸ್ಟಿನಿಂದ ಪ್ರಕಟವಾದ ಕೆಲವೇ ತಿಂಗಳಲ್ಲಿ ಈ ಬಾಲ-ರಾಮಾಯಣದ ಪ್ರಥಮ ಸಂಪುಟವು ಪ್ರಕಟವಾಗುತ್ತಿರುವುದು ಒಂದು ಯೋಗಾಯೋಗವೆಂದೇ ಹೇಳಬಹುದು. ಇಷ್ಟು ಶೀಘ್ರವಾಗಿ ಆರ್ಥಿಕ ಅನುಕೂಲತೆಯಾದೀತೆಂದು ಅನಿಸಿರಲಿಲ್ಲ. ಭಗವಂತನ ಕರುಣೆಯಿಂದ ಮಹಾದಾನಿಗಳು ಮುಂದೆ ಬಂದಿದ್ದಾರೆ.

ಬಾಲರಾಮಾಯಣವು ಆರು ಭಾಗಗಳಲ್ಲಿ ಪ್ರಕಟವಾಗುವುದು. ಈ ಮೊದಲನೆಯ ಭಾಗದಲ್ಲಿ ಬಾಲಕಾಂಡ, ಅಯೋಧ್ಯಾಕಾಂಡ ಪೂರ್ವಭಾಗ, ಉತ್ತರ ಭಾಗಗಳು ಪ್ರಕಟವಾಗಿವೆ. ಎರಡನೆಯ ಭಾಗದಲ್ಲಿ ಅರಣ್ಯಕಾಂಡ, ಕಿಷ್ಕಿಂಧಾಕಾಂಡಗಳು ಪ್ರಕಟವಾಗುವವು. ಮೂರನೆಯ ಭಾಗದಲ್ಲಿ ಸುಂದರಕಾಂಡ, ನಾಲ್ಕನೆಯ ಭಾಗದಲ್ಲಿ ಯುದ್ಧಕಾಂಡ ಪೂರ್ವಭಾಗ, ಐದನೆಯ ಭಾಗದಲ್ಲಿ ಯುದ್ಧಕಾಂಡ ಉತ್ತರಭಾಗ, ಈ ರೀತಿ ಪ್ರಕಟಿಸಲು ಯೋಜಿಸಲಾಗಿದೆ. ಹಣದ ಅನುಕೂಲತೆಯಾದಂತೆ ಪ್ರಕಟಣೆಗಳು ಹೊರಗೆ ಬರುವವು. ಅದಕ್ಕೆ ಉದಾರಹೃದಯದ ದಾನಿಗಳ ಸಹಾಯ-ಸಹಕಾರವೇ ಆಧಾರ.

ಬಾಲರಾಮಾಯಣದ ಮೊದಲನೆಯ ಮತ್ತು ಎರಡನೆಯ ಭಾಗಗಳ ಪ್ರಕಟನೆಗಾಗಿ ಮಹಾದಾನಿಗಳಾದ ಶ್ರೀ ಮಲ್ಲಪ್ಪ ಶಿಂಧೆಯವರು ತಮ್ಮ

ತಂದೆ–ತಾಯಿಯವರ ಸ್ಮರಣಾರ್ಥವಾಗಿ ಉದಾರ ಧನಸಹಾಯ ಮಾಡಿ ದುದಕ್ಕಾಗಿ ಬಾಲರಾಮಾಯಣದ ಮೊದಲಿನ ಎರಡು ಸಂಪುಟಗಳು ಇಷ್ಟು ಶೀಘ್ರವಾಗಿ ಪ್ರಕಟವಾಗಲು ಅನುಕೂಲವಾಗಿದೆ. ಅವರ ಈ ಸಹಾಯ ಕ್ಕಾಗಿ ಅತ್ಯಂತ ಕೃತಜ್ಞನು.

ಸಹಧರ್ಮದರ್ಶಿಗಳಾದ ಡಾ. ಎ. ಶಂಕರ ಮತ್ತು ಶ್ರೀ ಎಸ್. ಜಿ. ಲೋಖಂಡೆ, ಎಂಜಿನಿಯರ ಇವರ ಉತ್ಸಾಹ ಅದಮ್ಯವಾದುದು. ಅವರಿಬ್ಬರ ಸಹಕಾರ ಹಾಗೂ ಪ್ರಯತ್ನದ ಫಲವಾಗಿಯೇ ಬಾಲರಾಮಾಯಣವು ಇಷ್ಟು ಶೀಘ್ರ ಬೆಳಕು ಕಂಡಿದೆ. ಅವರಿಗೂ ಕೃತಜ್ಞ.

ಸುಂದರವಾಗಿ ಅಲ್ಪಾವಕಾಶದಲ್ಲಿ ಮುದ್ರಿಸಿದ ಶ್ರೀ ಘಾಣೇಕರರಿಗೂ ಕೃತಜ್ಞತೆಗಳು.

ರಾಯಚೂರು
೧೪–೧–೧೯೭೭
ಮಕರ ಸಂಕ್ರಮಣ

ನಾರಾಯಣರಾವ ಕಾಳಿಕೋಟಿ

# ಶ್ರೀರಾಮ ಸೇವಾ ಟ್ರಸ್ಟ್, ರಾಯಚೂರು

## ಧಾರ್ಮಿಕ ಗ್ರಂಥಪ್ರಕಾಶನ ವಿಭಾಗಕ್ಕೆ ಧನಸಹಾಯ ಮಾಡಿದ

## ಮ ಹ ನೀ ಯ ರು

೯ ೮-೧೯೭೬ ರಿಂದ ೧೪-೧-೧೯೭೭ರ ವರೆಗೆ

ರೂಪಾಯಿ

೧. ಶ್ರೀ ಮಲ್ಲಪ್ಪ ಶಿಂಧೆ ಮತ್ತು ಬಂಧುಗಳು ೫೦೦೦-೦೦
(ತಮ್ಮ ದಿವಂಗತ ತಂದೆ-ತಾಯಿಯವರ ಸ್ಮರಣಾರ್ಥ)

೨. ಶ್ರೀ ಪ್ರಹ್ಲಾದರಾವ ಎನ್. ಕುಲಕರ್ಣಿ ೨೦೧-೦೦
ಗುಳೇದಗುಡ್ಡ ರೋಡ

೩. ಶ್ರೀ ಎಮ್. ಎಸ್. ನಾಗರಾಜ, ಚಾರ್ಟರ್ಡ್ ೧೦೧-೦೦
ಅಕೌಂಟಂಟ್, ರಾಯಚೂರು

೪. ಶ್ರೀ ಎನ್. ಆರ್. ಕೋಡಿಹಾಳ, ೧೦೧-೦೦
ರೇಲ್ವೆಗಾರ್ಡ, ಸೊಲ್ಲಾಪುರ

೫. ಇತರರು ೫೨-೦೦

ಧರ್ಮದರ್ಶಿಗಳು

## ಶ್ರೀರಾಮ ಸೇವಾ ಟ್ರಸ್ಟ್‌ದಿಂದ ಪ್ರಕಟವಾದ
## ಶ್ರೀ ನಾರಾಯಣರಾವ ತಾಳೀಕೋಟಿ ಇವರು ಬರೆದ
## 'ಶ್ರೀ ಭಗವದ್ಗೀತೆ'ಯ ಬಗೆಗೆ ಬಂದ ಅಭಿಪ್ರಾಯಗಳು

೧. ಭಗವದ್ಗೀತೆಯ ಹದಿನೆಂಟು ಅಧ್ಯಾಯಗಳ ೭೦೦ ಶ್ಲೋಕಗಳು ಸರಳ ಕನ್ನಡದಲ್ಲಿ ಜನಸಾಮಾನ್ಯರಿಗೂ ತಿಳಿಯುವ ಉದ್ದೇಶದಿಂದ ಈ ಅನುವಾದ ಮಾಡಲಾಗಿದೆ. ತಮ್ಮ ಉದ್ದೇಶದಲ್ಲಿ ಅನುವಾದಕರು ಸಫಲರೂ ಆಗಿದ್ದಾರೆ........ಸಣ್ಣವರೂ ಹಾಡುತ್ತ ಹಾಡುತ್ತ ಅರ್ಥ ಮಾಡಿಕೊಳ್ಳ ಬಹುದಾದ ರೀತಿಯಲ್ಲಿ ಲಲಿತವಾಗಿದೆ ಅನುವಾದ.

'ಉದಯವಾಣಿ' ದೈನಿಕ ಮಂಗಳೂರು.
೧೪-೧೧-೧೯೭೬ (ಶ್ರೀರಾಮಾನುಜ ಇವರಿಂದ)

೨. ಸಂಸ್ಕೃತ ಭಾಷೆಯೇ ಬಾರದ ಜನತೆಗೆ ಕೇವಲ ಲಲಿತವಾದ ಹೊಸಗನ್ನಡ ಚೌಪದಿಗಳ ಮೂಲಕ ಮೂಲವನ್ನೆಷ್ಟರಮಟ್ಟಿಗೆ ಅಡಕವಾಗಿ ಹೇಳಬಹುದೋ ಅಷ್ಟರಮಟ್ಟಿಗೆ ಈ ಅನುವಾದಕರು ಹೇಳಹೊರಟು ಗಣನೀಯ ಯಶಸ್ಸನ್ನು ದೊರಕಿಸಿದ್ದಾರೆ. ಒಂದು ಸಾಲಿನಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ಗಣಗಳಿರುವ ಛಂದಸ್ಸಿನ ಓಟ ಕನ್ನಡ ವಾಚಕರ ಕಿವಿಗೆ ಹಿತವಾಗಿದೆ.

'ಪ್ರಜಾವಾಣಿ' ದೈನಿಕ ಬೆಂಗಳೂರು.
೨೬-೧೨-೧೯೭೬ (ಡಾ. ಕೆ ಕೃಷ್ಣಮೂರ್ತಿ ಇವರಿಂದ)

೩. "Your translation has brought out the spirit of the original. By translating the Geeta into Kannada, that too in the form of stokas, you have done a great service to the Kannada speaking people."

ಮಾನ್ಯ ಶ್ರೀ. ಕೆ. ಎಸ್ ಹೆಗಡೆ
ಸುಪ್ರೀಮ ಕೋರ್ಟಿನ ನಿವೃತ್ತ ನ್ಯಾಯಾಧೀಶರು

೪. ಗೀತೆಯು ಜ್ಞಾನರೂಪ ಗ್ರಂಥ. ಸುಲಭಪದ್ಯಗಳಿಂದ ಜನ-ಸಾಮಾನ್ಯರಿಗೆ ತಿಳಿಸುವ ಯತ್ನ ಯೋಗ್ಯವಾಗಿದೆ. ನಿಮ್ಮ ಶ್ರಮ ಸಫಲವಾಗಲೆಂದು ಹಾರೈಸುತ್ತೇನೆ.

**ವೀರೇಂದ್ರ ಹೆಗ್ಗಡೆ ಧರ್ಮಸ್ಥಳ**

೫. ಅನುವಾದವು ಸರಳವಾಗಿಯೂ, ಸುಲಲಿತವಾಗಿಯೂ, ಆಗಿ-ರುವುದಲ್ಲದೆ ಮೂಲದ ಅರ್ಥಕ್ಕಾಗಲಿ ಭಾವಕ್ಕಾಗಲಿ ಎಲ್ಲಿಯೂ ಚ್ಯುತಿ ಬಂದಿಲ್ಲ. ಸಾಂಗತ್ಯಧಾಟಿಯಲ್ಲಿ ಹಾಡಲೂ ಬಹುದು. ಓದುತ್ತ ಹೋದಂತೆ ಅರ್ಥವು ಸ್ಪಷ್ಟವಾಗುತ್ತ ಹೋಗುತ್ತದೆ. ಇದೊಂದು ವೈಶಿಷ್ಟ್ಯಪೂರ್ಣ ವಾದ ರಚನೆಯೆಂದು ನನ್ನ ಮತ.

**ಶ್ರೀ ವೆಂಕಟರಾವ ನಾಯಕ**
**ನಿವೃತ್ತ ಜಿಲ್ಲಾ ಶಿಕ್ಷಣಾಧಿಕಾರಿಗಳು, ಕಲಬುರ್ಗಿ.**

೬. ಗೀತೆಯ ಅನುವಾದದಲ್ಲಿ ನಿಮಗೆ ದೊರೆತ ಆನಂದದ ಒಂದಂಶ ವಾದರೂ ಇನ್ನೊಬ್ಬರಿಗೆ ತಲುಪುವುದು.

**ಡಾ ವಿ. ಕೃ. ಗೋಕಾಕ.**
**ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿಗಳು**

೭. ಭಗವದ್ಗೀತೆಯಂತಹ ಅವಿರತ ಜ್ಞಾನಗಂಗೆಯು ನಿಮ್ಮ ಭಗೀರಥ ಪ್ರಯತ್ನದಿಂದ ಕನ್ನಡ ಭಾಷೆಯಲ್ಲಿ ಮೂಡಿ ಹರಿದು ಕನ್ನಡಿಗರೆಲ್ಲರ ಹೃದಯಕಮಲಗಳನ್ನು ಮುಟ್ಟುವದೆಂಬ ಪೂರ್ಣ ಭರವಸೆ ನನಗಿದೆ.

**ಪ್ರೊ. ರಮೇಶ ಬಿ. ಜೋಶಿ**
**ಅಕ್ಕಲಕೋಟ. (ಮಹಾರಾಷ್ಟ್ರ)**

೮. ಸಾಮಾನ್ಯನಿಗೂ ಗೀತಾಮಾತೆಯನ್ನು ಅರ್ಥ ಮಾಡಿಕೊಡುವ ಈ ಪುಸ್ತಕದ ಶೈಲಿಯು ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡಿದೆ.

**ಪ್ರೊ. ವಸಂತ ಕುಷ್ಟಗಿ, ಶಹಾಬಾದ.**

೯. ಪುಸ್ತಕ ಬಹಿರಂಗ ಅಂತರಂಗ ಸೌಂದರ್ಯದಿಂದ ಕೂಡಿದೆ. ಎಲ್ಲಕ್ಕೂ ಮಿಗಿಲಾದ ಸಾಧನೆಯೆಂದರೆ ಗಹನ ತಾತ್ವಿಕ ಶ್ಲೋಕಗಳ, ಸುಲಿದ

ಬಾಳೆಯ ಹಣ್ಣಿನಂತೆ ಇರುವ ಸರಳ ಕನ್ನಡ ಪದಗಳಲ್ಲಿ ಅನುವಾದ.

ಪ್ರೊ. ಕಮಲನಾಥ ಪಂಕಜ,
ಆದವಾನಿ. (ಆಂಧ್ರಪ್ರದೇಶ)

೧೦. ಶ್ರೀ ತಾಳೀಕೋಟೆ ನಾರಾಯಣರಾಯರ ಕುಂದಿಲ್ಲದ ಲೇಖನಿಯಿಂದ ಹೊರಹೊರಟ 'ಶ್ರೀ ಭಗವದ್ಗೀತೆ' ನಮಗಿರಲು, ಸಂಸ್ಕೃತದ ಹಂಗೇಕೆ ? ಭ್ರಾಂತಿಯೇಕೆ ?

ಶ್ರೀ ಎಸ್. ಎಸ್. ಅವಂತೀಕರ್
ಅಸಿಸ್ಟಂಟ ಎಂಜಿನಿಯರ, ಎರಮರಸ್ (ರಾಯಚೂರು)

೧೧. 'ಶ್ರೀ ಭಗವದ್ಗೀತೆ'ಯ ಅನುವಾದ ಸರಳ ಹಾಗೂ ಸುಲಭ ಗ್ರಾಹ್ಯವಾಗುವ ರೀತಿಯಲ್ಲಿ ಅನುವಾದಿತವಾಗಿದೆ.

ಶ್ರೀ ರಮೇಶ ಪಾಟೀಲ.
ಜ್ಯೂನಿಯರ್ ಎಂಜಿನಿಯರ, ಗೊರೂರು

೧೨. ಗೂಢವಾದ ಶ್ರೀ ಗೀತಾಮಾತೆಯ ತತ್ತ್ವವನ್ನು ಸಮಸ್ತರಿಗೂ ತಿಳಿಯುವಂತೆ, ಅರ್ಥವಾಗುವಂತೆ ಭಗವಂತನು ನಿಮ್ಮಿಂದ ನುಡಿಯಿಸಿದ್ದಾನೆ.

ಶ್ರೀ ರಾ. ವಿ. ಕುಷ್ಟಗಿ, ಗುಲಬರ್ಗಾ
ನಿವೃತ್ತ ಲೇಖಕ ಶಿಕ್ಷಕರು

೧೩. ತಿಳಿಗನ್ನಡದಲ್ಲಿ ಸುಲಭ ಶೈಲಿಯಲ್ಲಿ ಬರೆದಿರುವ ಭಗವದ್ಗೀತೆಯು ನನಗೆ ಬಹಳ ಮೆಚ್ಚಿಗೆಯಾಗಿರುವದು.

ಹನುಮಂತರಾವ ಪಾಟೀಲ, ಘಾಣಕಶಿರೂರು.
ನಿವೃತ್ತ ಶಿಕ್ಷಕರು

೧೪. This new turn in your life is really worthy of your knowledge and intelligence.

ಶ್ರೀ. ಎನ್. ಎಸ್. ಜೋಶಿ. ಮುಂಬಯಿ
ಅಂಚೆಖಾತೆಯ ಅಧಿಕಾರಿಗಳು

೧೫. ಓದುತ್ತ–ಓದುತ್ತ ನನಗಾದ ಆನಂದ ಅವರ್ಣನೀಯ........ ತಾಯಿ ನುಡಿಯಾದ ಕನ್ನಡದಲ್ಲಿ ಓದಿಕೊಳ್ಳುತ್ತಿದ್ದರೆ ಅರ್ಥವು ಸ್ಪಷ್ಟವಾಗಿ ಮನಸಕ್ಕೆ ಸುಲಭವಾಗಿರುವುದು........ಅನುವಾದವು ಪದ್ಯರೂಪದಲ್ಲಿರು-

ವುದರಿಂದ, ನಿತ್ಯ ಪಾರಾಯಣಕ್ಕೆ ಹಾಡಿಕೊಂಡು ಹೇಳಿಕೊಳ್ಳಲು ಬಹಳ ಪ್ರಶಸ್ತವಾಗಿದೆ..........ಜನಸಾಮಾನ್ಯರ ದೃಷ್ಟಿಯಿಂದ ತಮ್ಮ ಕೃತಿ ಮಹತ್ವಪೂರಿತವಾದುದು.

ಬಿ. ರಾಮಶೇಷ ಶರ್ಮ. ಸಾಗರ

೧೬. ತಮ್ಮ ಭಗವದ್ಗೀತೆಯನ್ನು ಓದಿದ್ದೇನೆ. ತುಂಬಾ ಸಂತೋಷವನ್ನುಂಟು ಮಾಡಿತು. ನೀವು ಪಟ್ಟಿರುವ ಶ್ರಮ ಸಾರ್ಥಕವಾಯಿತು. ಈ ಮುಂದೆ, ಸಂಸ್ಕೃತ ಮೂಲಗ್ರಂಥಗಳ ಅನುವಾದ ತಮ್ಮಿಂದ ಹೊರಬರಲೆಂದು ಭಗವಂತನಲ್ಲಿ ಪ್ರಾರ್ಥನೆ.

ಬಿ. ಎಲ್. ತಿಪ್ಪಾಚಾರಿ. ಚಳ್ಳಕೆರೆ.



# ಪರಿವಿಡಿ

# ಬಾಲಕಾಂಡ

## ೧. ಪ್ರಾರ್ಥನೆ

ಸಾಗರಶಯನನನೆ ಇಂದಿರೆ ರಮಣನೆ
ಕೌಸ್ತುಭ ಹಾರವ ಧರಿಸಿದ ಶ್ರೀಕೃಷ್ಣನೆ
ಶಂಖವ ಚಕ್ರವ ಗದೆಯನು ಕಮಲವ
ಹೊಂದಿದ ವಿಷ್ಣುವೆ ಕರುಣಿಸು ಎನ್ನನು ‖ ೧ ‖

ಸಾಗರ ಸುತೆಯೇ ಭಾಗ್ಯದ ಲಕ್ಷ್ಮಿಯೆ
ಮುಕುಂದನರಸಿಯೆ ಶ್ರೀಮಾತೆ ತಾಯೇ
ಶ್ರೀಹರಿ ಹೃದಯವ ತುಂಬಿದ ರಾಣಿಯೆ
ಬೇಡುವೆ ನಿನ್ನನು ಕರುಣಿಸು ಎನ್ನನು ‖ ೨ ‖

ಬ್ರಹ್ಮನ ರಾಣಿಯೆ ಸರಸತಿ ವಾಣಿಯೆ
ವೀಣಾಪಾಣಿಯೆ ಜ್ಞಾನದ ಖಣಿಯೇ
ಪೋಣಿಸು ಎನ್ನಯ ಮನದಲಿ ತಾಯಿಯೆ
ರಾಮನ ಕತೆಯನು ಚಂದದಿ ನೀನು ‖ ೩ ‖

ವಂದಿಪೆ ಗಣಪನೆ ನಿನ್ನಯ ಚರಣಕೆ
ವಂದ್ಯನೆ ಕರುಣಿಸು ಶಕ್ತಿಯ ಬರೆಯಲು
ಸುಂದರ ಕಥೆಯನು ಪಾವನ ರಾಮನ
ಎಂದಿಗು ಸವೆಯದ ಪುಣ್ಯದ ಖಣಿಯನು || ೪ ||

## ೨. ಅಯೋಧ್ಯಾನಗರ

ಇದ್ದಿತು ಹಿಂದಕೆ ನಗರವು ಒಂದು
ಕರೆದರು ನಗರವ ಅಯೋಧ್ಯೆಯು ಎಂದು
ಕಟ್ಟಿದ ಪಟ್ಟಣ ಮನುವಡ ಮೊದಲು
ಆಳಿದರದರಲಿ ಇಕ್ಷ್ವಾಕುವರರು || ೫ ||

ಅವರಲಿ ಹುಟ್ಟಿದ ರಾಜನು ಸಗರನು
ಕಡಿಸಿದ ಅವನೇ ಭೂಮಿಯ ಆಳದಿ
ಆಯಿತು ಅದುವೇ ಸಾಗರವೆಂದು
ಇಂತಹ ವಂಶದಿ ಜನಿಸಿದ ರಾಮನು || ೬ ||

ಇದ್ದಿತು ರಾಜ್ಯವು ಕೋಸಲವೆಂಬುದು
ಹರಿಯಿತು ಅಲ್ಲಿಯೆ ಸರಯೂ ನದಿಯು
ನೆರೆಯಲಿ ಬೆಳೆಯಿತು ಅಯೋಧ್ಯಾಪುರವು
ಆಯಿತು ಅದುವೇ ರಾಜರ ತಾಣವು || ೭ ||

ಇದ್ದಿತು ಅದುವೇ ಸುಂದರ ನಗರವು
ಯೋಜನ ಉದ್ದವು ಹನ್ನೆರಡು ಇದ್ದು
ಅಗಲವು ಇದ್ದಿತು ಯೋಜನ ಮೂರು
ವಿಶಾಲ ಸುಂದರ ಬೀದಿಗಳಿದ್ದವು || ೮ ||

ದಶರಥ ರಾಜನು ಆಳುತಲಿದ್ದನು
ಇಂದ್ರನ ತೆರದಿಂ ಭೋಗಿಪ ರಾಜ್ಯವ
ಪಟ್ಟಣವೆಲ್ಲಾ ಇದ್ದಿತು ಸುಂದರ
ಯೋಜಿತ ನಿರ್ಮಿತ ಸೌಧಗಳೆಲ್ಲಾ ॥ ೯ ॥

ತುಂಬಿದೆ ನಗರವು ಶಿಲ್ಪಿಗಳಿಂದಾ
ಯೋಧರು ವೀರರು ಗಾಯಕರಿಂದಾ
ವಣಿಕರು ದ್ವಿಜವರ ಗಣಿಕೆಯರಿಂದಾ
ಕಾಣಿಕೆ ಕೊಡುತಿಹ ಸಾಮಂತರಿಂದಾ ॥ ೧೦ ॥

ಪಟ್ಟಣವಿದ್ದಿತು ಪಗಡೆಯ ಪಟ್ಟದಿ
ನಗರದ ಮಧ್ಯದಿ ಕೂಡುವ ಬೀದಿಯು
ಕೇಳಲು ಎಲ್ಲೆಡೆ ದುಂದುಭಿ ಸದ್ದಲಿ
ಮೃದಂಗ ವೀಣೆಯ ಕುಣಿತದ ರವವು ॥ ೧೧ ॥

ಇದ್ದರು ಇಲ್ಲಿಯೆ ಸಾಹಸಿ ಶೂರರು
ಮಲ್ಲರು ಎಲ್ಲರು ಗರಡಿಯ ವೀರರು
ಇದ್ದರು ಋಷಿಗಳು ಬ್ರಾಹ್ಮಣಶ್ರೇಷ್ಠರು
ತಾಪಸಪುಂಜರು ಇಂದ್ರಿಯಜಿತರು ॥ ೧೨ ॥

ಇದ್ದನು ದಶರಥ ವೇದಜ್ಞಾನಿಯು
ಅತಿರಥ ತೇಜಸಿ ದೂರದರ್ಶಿಯೂ
ಕರೆದರು ಅವನನು ರಾಜರ್ಷಿಯೆಂದು
ಪಡೆದನು ಹೆಸರನು ಮೂಲೋಕಗಳಲಿ ॥ ೧೩ ॥

ಇದ್ದಿತು ಅವನಲಿ ಚತುರಂಗಬಲವು
ಏಳನು ವೈರಿಯು ಅವನಿಗೆ ಎದುರಲಿ
ಇದ್ದನು ಕುಬೇರ. ದೇವೇಂದ್ರನ ಸಮ
ಪ್ರಜೆಗ್ಗಳು ಇದ್ದರು ತೃಪ್ತರು ಎಲ್ಲರು ॥ ೧೪ ॥

ನಾಸ್ತಿಕರಾರೂ ಇರಲೇ ಇಲ್ಲವು
ಸುಳ್ಳನು ಎಲ್ಲೂ ಕಾಣಲೇ ಇಲ್ಲವು
ವಿದ್ಯೆಯ ಕಲಿಯುತ ಎಲ್ಲರು ದುಡಿವರು
ಹೊಟ್ಟೆಯಕಿಚ್ಚದು ಕಾಣದ ಗುಣವು ॥ ೧೫ ॥

ದಾನಿಯು ಜನತೆಯು ರಾಜನ ತೆರದಿ
ಇದ್ದರು ಸುಂದರ ಬಲಯುತರಾಗಿ
ಶತಾಯುಷಿ ಇರದೆ ಸತ್ತವರಿಲ್ಲವು
ಧರ್ಮವ ಬಿಡುತಲಿ ನಡೆದವರಿಲ್ಲವು ॥ ೧೬ ॥

ಬಲಯುತ ಸೈನ್ಯವು ಮೀರಿದ ವೀರರು
ಗಜಗಳು ಕುದುರೆಯು ಒಂಟೆಯು ಎಲ್ಲಾ
ಆಯುಧ ತುಂಬಿವೆ ಮನೆಮನೆಗಳಲಿ
ಅಯೋಧ್ಯೆ ಹೆಸರದು ಆಯಿತು ಸಾರ್ಥಕ ॥ ೧೭ ॥

ರಾಜಗೆ ಇದ್ದರು ಸಚಿವರು ಎಂಟು
ನಿಪುಣರು ಪ್ರಿಯರು ನಿರತರು ಎಲ್ಲರು
ಕರೆದರು ಅವರನು ಜಯಂತ ಅಶೋಕ
ಮಂತ್ರಪಾಲ ವಿಜಯ ಅರ್ಥಸಾಧಕ ॥ ೧೮ ॥

ಧೃಷ್ಟಿ ಸಿದ್ಧಾರ್ಥ ಸುಮಂತರು ಎಂದು
ಅಲ್ಲದೆ ಇದ್ದರು ಪುರೋಹಿತರಿಬ್ಬರು
ವಸಿಷ್ಠ ವಾಮದೇವ ಋತ್ವಿಜರಿದ್ದರು
ಸುಯಜ್ಞ ಜಾಬಾಲಿ ಕಾಶ್ಯಪ ಗೌತಮ || ೧೯ ||

ಮಾರ್ಕಂಡೇಯ ಕಾತ್ಯಾಯನರೆಂದು
ಇದ್ದರು ಎಲ್ಲರು ಸವಿನಯಶೀಲರು
ಇಂದ್ರಿಯ ಗೆಲ್ಲುತ ಶಾಸ್ತ್ರವ ತಿಳಿದೂ
ಸ್ವಾರ್ಥವು ಇಲ್ಲದ ನೀತಿಯ ಜನರು || ೨೦ ||

ರಾಜ್ಯದ ಒಳಿತನು ಸಂತತ ಚಿಂತಿಸಿ
ಅಂಜಿಕೆ ಇಲ್ಲದೆ ನ್ಯಾಯವ ನೀಡುತ
ಆಶೆಯ ಸಿಟ್ಟನು ತೊರೆದವರಾಗಿ
ರಾಜ್ಯದ ಹಿತವನು ಚಿಂತಿಪರಾಗಿ || ೨೧ ||

ದೇಶದ ಗುಟ್ಟನು ಬಿಡದವರಾಗಿ
ಚಾರರ ಮೂಲಕ ಎಲ್ಲವ ತಿಳಿಯುತ
ದುಷ್ಟರ ಶಿಕ್ಷಿಸಿ ಶಿಷ್ಟರ ರಕ್ಷಿಸಿ
ನುರಿತವರಿದ್ದರು ರಾಜ್ಯಶಾಸ್ತ್ರದಲಿ || ೨೨ ||

## ೩. ದಶರಥನಿಗೆ ಮಕ್ಕಳ ಚಿಂತೆ

ಇದ್ದರು ಎಲ್ಲವು ಇದ್ದಿತು ಕೊರತೆಯು
ರಾಜಗೆ ಅನುದಿನ ಮಕ್ಕಳ ಚಿಂತೆಯು
ಕೇಳಿದ ಸಚಿವರ ಚಿಂತೆಯ ಉಸುರುತ
ಹೇಳಿದರೆಲ್ಲರು ಯಾಗವ ಮಾಡಲು || ೨೩ ||

ಮಕ್ಕಳ ಇಚ್ಛೆಯು ಬಲಯುತವಿರಲು
ಸರಯೂ ತೀರದ ಉತ್ತರ ಭಾಗದಿ
ಯಜ್ಞದ ಮಂಟಪ ರಚಿಸಲು ಹೇಳುತ
ನಡೆದನು ರಾಜನು ಅರಮನೆ ಕಡೆಗೆ || ೩೪ ||

ತಿಳಿಯುತ ವಿಷಯವ ಹೊರಟನು ಸುಮಂತ
ನೆಟ್ಟಗೆ ದಶರಥನರಮನೆ ಕಡೆಗೆ
ಗುಟ್ಟನು ತಿಳಿಸಿದ ಅವನಿಗೆ ಬಂದನು
ಋಷ್ಯಶೃಂಗನು ಅವಶ್ಯಕವೆಂದು || ೩೫ ||

ಕೇಳಲು ಕಾರಣ ಹೇಳಿದ ಸುಮಂತ
ಸನತ್ಕುಮಾರನು ಹೇಳಿದ ಮಾತಿದು
ಋಷ್ಯಶೃಂಗನು ಮಾಡಲು ಯಾಗವ
ಸಿದ್ಧಿಯು ನಿಶ್ಚಿತ ದಶರಥರಾಜಗೆ || ೩೬ ||

ಕೇಳುತ ಇದುವೇ ತುಂಬಿತು ಹರ್ಷವು
ದಶರಥ ಹೊರಟನು ಪರಿವಾರ ಸಹಿತ
ಒಪ್ಪಿಸಿ ಅವನನು ಹೆಂಡತಿ ಸಹಿತ
ಮರಳಿದ ಊರಿಗೆ ಸಂಭ್ರಮದಿಂದ || ೩೭ ||

## ೪. ಅಶ್ವಮೇಧಯಾಗ

ಬಂದಿತು ವಸಂತ ಕಾಲವು ಕೂಡಲೆ
ನಿಂತಿತು ಮಂಟಪ ಸರಯೂ ತೀರದಿ
ಬಂದರು ಋಷಿಗಳು ಮುನಿಗಳು ರಾಜರು
ಯಜ್ಞದ ಅದ್ಭುತ ಪರಿಯನು ನೋಡಲು || ೩೮ ||

ಬಂದರು ರಾಜರು ಜನಕನು ಕೇಕಯ
ಕಾಶೀರಾಜನು ರೋಮಪಾದನೂ
ಬಂದರು ಸೌವೀರ ಸಿಂಧು ರಾಜರೂ
ಅಲ್ಲದೆ ಅನೇಕ ನರೇಶರು ಕೂಡ || ೨೯ ||

ಋಷ್ಯಶೃಂಗನು ಆದನು ಋತ್ವಿಜ
ನಡೆಸಿದ ಯಾಗವ ಚಾಚೂ ತಪ್ಪದೆ
ಕೊಡುತಲಿ ಹವಿಸನು ಶಾಸ್ತ್ರಕೆ ತಪ್ಪದೆ
ನೀಡುತ ಅನ್ನದ ದಾನವ ಹೇರಳ || ೩೦ ||

ಕುದುರೆಯು ಬಂದಿತು ದೇಶವ ಸುತ್ತಿ
ಕಳೆಯಿತು ವರುಷವು ಯಾಗವ ಮಾಡುತ
ಮುಗಿಯಿತು ಯಜ್ಞವು ಇಚ್ಛಿತ ತೆರದಿ
ಸಿದ್ಧಿಯ ಕಾಲವು ಬಂದಿತು ಬೇಗನೆ || ೩೧ ||

ಅಶ್ವಮೇಧವದು ಮುಗಿಯಿತು ಸರಿಯೇ
ಮಕ್ಕಳ ಚಿಂತೆಯು ಪೋಪುದೆ ಮುನಿಯೇ
ಕೇಳಿದ ದಶರಥ ಋಷ್ಯಶೃಂಗಗೆ
ಕಳೆಯಿತು ದೋಷವು ಅಂದನು ಅವನು || ೩೨ ||

### ೫. ಪುತ್ರಕಾಮೇಷ್ಟಿಯಾಗ

ಇಷ್ಟಕೆ ಮುಗಿಯದು ರಾಜನೆ ತಿಳಿನೀ
ಪುತ್ರಕಾಮೇಷ್ಟಿ ಯಾಗವ ಮಾಡಲು
ಸಿದ್ಧಿಯ ಪಡೆಯಲು ಅರ್ಹನು ಈಗಲೆ
ಕೂಡಲೆ ಮಾಡೆಲೊ ಯಾಗವ ನೀನು || ೩೩ ||

ಹೇಳಿದೆ ರೀತಿ ಅಥರ್ವಣ ವೇದದಿ
ಮಾಡಿದ ಯಾಗವ ಕೂಡಲೆ ರಾಜನು
ಶ್ರದ್ಧೆಯು ಭಕ್ತಿಯು ಮೂರ್ತಿಯು ಆಗುತ
ಬೇಡಿದರಾಗಲೆ ರಾವಣ ನಿಗ್ರಹ || ೩೪ ||

ಎದ್ದಿತು ತೇಜವು ಹೋಮದ ಕುಂಡದಿ
ನಿಂತನು ದೇವನು ಶಾಮಲ ವರ್ಣದ
ರಕ್ತಾಂಬರಧಾರಿ ರಕ್ತನೇತ್ರನು
ತೇಜೋರಾಶಿಯು ದಿವ್ಯಪುರುಷನು || ೩೫ ||

ಹಿಡಿದಿಹ ಕೈಯಲಿ ಚಿನ್ನದ ಪಾತ್ರೆಯು
ತುಂಬಿದೆ ಅದರಲಿ ದೇವನಪಾಯಸ
ದಶರಥ ಜೋಡಿಸಿ ಕೈಯನು ಕೇಳಿದ
ಕರುಣಿಸು ದೇವನೆ ಏನಿದು ಹೇಳು || ೩೬ ||

ಅಂದನು ಬಂದವ ಬೊಮ್ಮನ ಪುರುಷನು
ಬಂದೆನು ಬೊಮ್ಮನ ಅಣತಿಯಂತೆಯೆ
ಕೊಡು ನೀ ಅರಸಿಗೆ ಪಾಯಸವಿದನು
ಪಡೆಯುವೆ ಮಕ್ಕಳ ಸಿರಿವರ ಅಂಶಜ || ೩೭ ||

ಪಾಯಸ ಕೊಡುತಲಿ ಆದನು ಮಾಯವು
ರಾಜನು ಕರೆದನು ಅರಸಿಯರೆಲ್ಲರ
ಕೊಟ್ಟನು ಅರ್ಧವ ಹಿರಿಸತಿಗೆ ಮೊದಲು
ಉಳಿದರ್ಧದಲಿ ಅರ್ಧವ ಸುಮಿತ್ರೆಗೆ || ೩೮ ||

ಉಳಿದಿಹ ಪಾಯಸ ಭಾಗವ ಮಾಡುತ
ಕೊಟ್ಟನು ಕೈಕಯಿ ರಾಣಿಗೆ ಅರ್ಧವ
ಉಳಿದುದ ಕೊಟ್ಟನು ಸುಮಿತ್ರೆಗೆ ಮತ್ತೆ
ಇಂತಿರೆ ಹಂಚಿದ ಅರಸಿಯರೊಳಗೆ ॥ ೩೯ ॥

## ೬ ದೇವಾಂಶರ ಜನನ

ರಾಣಿಯರೆಲ್ಲರು ಧರಿಸುತ ಗರ್ಭವ
ತುಂಬಿದರೆಲ್ಲೆಡೆ ಸಂತಸ ಸೌರಭ
ನಲಿಯಿತು ಜನತೆಯು ದೇಶದ ತುಂಬಾ
ರಾಜನು ಆದನು ಹರ್ಷದ ಮುದ್ದೆಯು ॥ ೪೦ ॥

ತಿಳಿದರು ಸುರಗಣ ವಿಷ್ಣುವು ಹುಟ್ಟಲು
ಮಾಡಿದ ನಿಶ್ಚಯ ಸೇರಿದ ಗರ್ಭವ
ಇದ್ದಿತು ಗುರಿಯೂ ರಾವಣ ನಿಗ್ರಹ
ಇತರರು ದೇವರು ಕಳಿಸಿದರಂಶವ ॥ ೪೧ ॥

ಇಂದ್ರನ ಅಂಶನು ಆದನು ವಾಲಿಯು
ಸೂರ್ಯನ ಅಂಶನು ಸುಗ್ರೀವನಾಗಿ
ಕುಬೇರನ ಅಂಶನು ಗಂಧಮಾದನ
ಅಗ್ನಿಗೆ ನೀಲನು ವರುಣಗೆ ಸುಷೇಣ ॥ ೪೨ ॥

ವಾಯುವಿನ ಮಗನು ಹನುಮಂತನೆಂದು
ಅಲ್ಲದೆ ಇತರರು ದೇವಾಂಶರಾಗಿ
ವಿಶ್ವಕರ್ಮನ ಮಗನು ನಳನಾಗುತ
ಬಂದರು ಭೂಮಿಗೆ ಕಪಿವರರಾಗಿ ॥ ೪೩ ॥

ಇದ್ದರು ಎಲ್ಲರು ಕಾಮರೂಪಿಗಳು
ಶೂರರು ವೀರರು ಪರಮ ಸಾಹಸೀ
ಕಟ್ಟುತ ರಾಜ್ಯವ ವಾಲಿ ಸುಗ್ರೀವ
ಆದನು ಹನುಮನು ಸಚಿವನು ಅವರಿಗೆ ॥ ೪೪ ॥

ಇತ್ತಲಿ ನಲಿಯಿತು ಅಯೋಧ್ಯೆಯು ಆಗ
ರಾಣಿಯರೆಲ್ಲರು ತಳೆದರು ಗರ್ಭವ
ಕಳೆಯಿತು ವರುಷವು ಬಂದಿತು ಚೈತ್ರವು
ಬೆಳಕಿನ ಪಕ್ಷದ ನವಮಿಯ ದಿನದಲಿ ॥ ೪೫ ॥

ಇದ್ದಿತು ಆಗ ಪುನರ್ವಸು ನಕ್ಷತ್ರ
ಉಚ್ಚರಾಶಿಯಲಿ ಗ್ರಹಗಳು ಎಲ್ಲಾ
ಗುರು ಶುಕ್ರ ರವಿ ಶನಿ ಮಂಗಳರೆಲ್ಲ
ಲಗ್ನವು ಇದ್ದಿತು ಕರ್ಕಾಟಕವು ॥ ೪೬ ॥

ಚಂದಿರ ಗುರುಗಳ ಉದಯದ ಯೋಗವು
ಇಂತಹ ಮಂಗಲ ಸಮಯದಿ ಹುಟ್ಟಿದ
ಮಗನು ಕೌಸಲ್ಯೆಗೆ ಮೂಡಿತು ಬೆಳಕು
ನಂತರ ಹುಟ್ಟಿದ ಭರತ ಕೈಕಯಿಗೆ ॥ ೪೭ ॥

ಲಕ್ಷ್ಮಣ ಶತ್ರುಘ್ನರ ಪಡೆದಳು ಸುಮಿತ್ರೆ
ಹರಡಿತು ಸುದ್ದಿಯು ನಗರದ ತುಂಬಾ
ಬೆಳೆಯಿತು ಹಾಗೆಯೆ ದೇಶದ ತುಂಬಾ
ತೂರಿದರೆಲ್ಲೆಡೆ ಮುತ್ತು ರತ್ನಗಳ ೪೮ ॥

ಹರಿಯಿತು ಎಲ್ಲೆಡೆ ಹರ್ಷದ ಹೊನಲು
ಕಳೆದವು ದ್ವಾದಶ ದಿನಗಳು ಕೂಡಲೇ
ಇಟ್ಟರು ಹೆಸರನು ವಸಿಷ್ಠ ಗುರುಗಳು
ರಾಮ ಲಕ್ಷ್ಮಣ ಭರತ ಶತ್ರುಘ್ನ || ೪೯ ||

## ೭. ಬಾಲ್ಯ

ಮಕ್ಕಳು ಬೆಳೆದರು ನೋಡುತ ನೋಡುತ
ಕಲಿತರು ಎಲ್ಲರು ಶಾಸ್ತ್ರವ ವೇದವ
ಧನುರ್ವೇದದಲಿ ನುರಿತರು ಎಲ್ಲರು
ರಾಮನು ಆದನು ಎಲ್ಲರ ಕಣ್ಮಣಿ || ೫೦ ||

ಕೂಡಿದ ಲಕ್ಷ್ಮಣ ರಾಮನ ಜೊತೆಗೆ
ಬೆರೆತನು ಶತ್ರುಘ್ನ ಭರತನ ಜೊತೆಗೆ
ಹೊಂದಿಕೆ ಆದವು ಎರಡೂ ಜೊತೆಗಳು
ಅಗಲಿಕೆ ಕಾಣದು ಅವರಲಿ ಎಂದೂ || ೫೧ ||

ಬೆಳೆದರು ಆದರು ಯುವಕರು ಎಲ್ಲರು
ತಿಳಿದನು ದಶರಥ ನೋಡುತ ಅವರನು
ಬಂದಿದೆ ವಯವದು ಮದುವೆಗೆ ಈಗಲೆ
ನೋಡುವೆ ವಧುಗಳ ಯೋಗ್ಯವು ಸುಂದರ || ೫೨ ||

## ೮. ವಿಶ್ವಾಮಿತ್ರರ ಆಗಮನ

ಇಂತೆಯೆ ಚಿಂತಿಸಿ ಕರೆಸಿದ ಗುರುಗಳ
ಸಚಿವರು ಬಂದರು ಸಲಹೆಯ ಕೊಡಲು
ಎಲ್ಲರು ಕುಳಿತಿಹ ಸಮಯದಿ ಬಂದಿತು
ಸುದ್ದಿಯು ಕೌಶಿಕ ಬಂದಿಹನೆಂದು || ೫೩ ||

ಎಳೆಯನು ಎನ್ನುವ ಸಂಶಯ ಬೇಡಾ
ಇರುವನು ಶೂರನು ಕೊಲ್ಲುವ ಅವರನು
ಮಾಡುವೆ ಅವನಿಗೆ ಬಹು ಬಹು ಶುಭವನು
ಚಿಂತಿಸಲಾರದೆ ಕಳುಹಿಸು ಅವನನು || ೫೯ ||

ಕೇಳುತ ಈ ಪರಿ ರಾಜಗೆ ಹೊಳೆಯದು
ಹಾಗೆಯೆ ಹೇಳಿದ ಕೈಯನು ಮುಗಿಯುತ
ಮುನಿಗಳೆ ರಾಮನು ಇನ್ನೂ ಹಸುಳೆಯು
ಯುದ್ಧದ ಶಾಸ್ತ್ರದಿ ನುರಿತವನಲ್ಲವು || ೬೦ ||

ಬರುವೆನು ನಾನೇ ಸೈನ್ಯದ ಸಹಿತದಿ
ಇರುವೆನು ಅಲ್ಲಿಯೆ ಯಾಗವ ಮುಗಿಸಲು
ರಾಮನು ತಿಳಿಯನು ರಾಕ್ಷಸ ಮಾಯವ
ತಿಳಿಯನು ಇನ್ನೂ ಯುದ್ಧದ ರೀತಿಯ || ೬೧ ||

ಷಡ್ದಶಸಾವಿರ ಕಳೆದೆನು ವರ್ಷವ
ಪಡೆಯಲು ರಾಮನ ತಿಳಿಯಿರಿ ಮುನಿವರ
ಅಗಲಲು ಅವನನು ಆಗದು ಎನಗೆ
ಕರುಣಿಸಿ, ಬರುವೆನು ನಿಮ್ಮಯ ಸಂಗಡ || ೬೨ ||

ಕೇಳುತ ಈ ನುಡಿ ಉರಿದನು ಕೌಶಿಕ
ಕಣ್ಣುಗಳಾದವು ಬೆಂಕಿಯ ಉಂಡೆಯು
ನೋಡುತ ಅಂದನು ದಶರಥರಾಜಗೆ
ಹುಟ್ಟಿಹೆ ತಿಳಿದಿರು ರಘುಕುಲದಲಿ ನೀ || ೬೩ ||

ಎದ್ದನು ರಾಜನು ಸ್ವಾಗತ ಕೋರಲು
ಕೌಶಿಕ ಮುನಿಯೋ ಸಿಟ್ಟಿನ ಬೆಂಕಿಯು
ಮಾಡಿದ ಮನಸನು ಬಿಡದಿಹ ಹಟೆಯು
ಹೊರಟೆನು ದ್ವಾರಕೆ ಗುರುಗಳ ಸಹಿತ || ೫೪ ||

ಸ್ವಾಗತ ಕೋರುತ ಕರೆದನು ಒಳಗೆ
ಬಂದನು ಕೌಶಿಕ ಹರ್ಷದಿ ಒಳಗೆ
ರಾಜನು ಕೇಳಿದ ಮುನಿವರ ಕ್ಷೇಮವೆ
ಸೇವೆಯು ಬೇಕೇ ಸಿದ್ಧನು ಎಂದನು || ೫೫ ||

ಹರ್ಷದಿ ನಗುತಲಿ ಮುನಿವರ ಹೇಳಿದ
ಯೋಗ್ಯವು ನಿನ್ನಯ ಮಾತುಗಳೆಲ್ಲವು
ನಡೆದಿದೆ ನನ್ನಯ ಸಿದ್ಧಿಯ ಯಜ್ಞವು
ಬಂದಿದೆ ಇಂದಿಗೆ ರಾಕ್ಷಸ ಸಂಕಟ || ೫೬ ||

ಇರುವರು ಇಬ್ಬರು ರಕ್ಕಸ ಪುಂಡರು
ಕರೆವರು ಅವರನು ಮಾರೀಚ ಸುಬಾಹು
ಎನ್ನಯ ಯಜ್ಞವ ಸಾಗಲು ಬಿಡದಲೆ
ಸುರಿದರು ಅದರಲಿ ರಕ್ತಮಾಂಸಗಳ || ೫೭ ||

ಕೆಟ್ಟಿತು ಯಾಗವು ಆಯಿತು ನಿರಾಶೆ
ಯಜ್ಞದ ಕಾರಣ ಸಿಟ್ಟಿದು ಸಲ್ಲದು
ನಾನೇ ಶಿಕ್ಷಿಸೆ ಯಜ್ಞದ ಗತಿಯೇಂ
ಕಳಿಸುತ ರಾಮನ ರಕ್ಷಿಸು ಯಾಗವ || ೫೮ ||

ಎಳೆಯನು ಎನ್ನುವ ಸಂಶಯ ಬೇಡಾ
ಇರುವನು ಶೂರನು ಕೊಲ್ಲುವ ಅವರನು
ಮಾಡುವೆ ಅವನಿಗೆ ಬಹು ಬಹು ಶುಭವನು
ಚಿಂತಿಸಲಾರದೆ ಕಳುಹಿಸು ಅವನನು || ೫೯ ||

ಕೇಳುತ ಈ ಪರಿ ರಾಜಗೆ ಹೊಳೆಯದು
ಹಾಗೆಯೆ ಹೇಳಿದ ಕೈಯನು ಮುಗಿಯುತ
ಮುನಿಗಳೆ ರಾಮನು ಇನ್ನೂ ಹಸುಳೆಯು
ಯುದ್ಧದ ಶಾಸ್ತ್ರದಿ ನುರಿತವನಲ್ಲವು || ೬೦ ||

ಬರುವೆನು ನಾನೇ ಸೈನ್ಯದ ಸಹಿತದಿ
ಇರುವೆನು ಅಲ್ಲಿಯೆ ಯಾಗವ ಮುಗಿಸಲು
ರಾಮನು ತಿಳಿಯನು ರಾಕ್ಷಸ ಮಾಯವ
ತಿಳಿಯನು ಇನ್ನೂ ಯುದ್ಧದ ರೀತಿಯ || ೬೧ ||

ಷಡ್ದಶಸಾವಿರ ಕಳೆದೆನು ವರ್ಷವ
ಪಡೆಯಲು ರಾಮನ ತಿಳಿಯಿರಿ ಮುನಿವರ
ಅಗಲಲು ಅವನನು ಆಗದು ಎನಗೆ
ಕರುಣಿಸಿ, ಬರುವೆನು ನಿಮ್ಮಯ ಸಂಗಡ || ೬೨ ||

ಕೇಳುತ ಈ ನುಡಿ ಉರಿದನು ಕೌಶಿಕ
ಕಣ್ಣುಗಳಾದವು ಬೆಂಕಿಯ ಉಂಡೆಯು
ನೋಡುತ ಅಂದನು ದಶರಥರಾಜಗೆ
ಹುಟ್ಟಿಹೆ ತಿಳಿದಿರು ರಘುಕುಲದಲಿ ನೀ || ೬೩ ||

ಕೊಟ್ಟಿಹ ಮಾತನು ಮುರಿಯುವ ರಾಜನೆ
ತಿಳಿದಿರು ನನ್ನನು ಕೌಶಿಕನೆಂಬುದ
ವಚನವ ಕೊಟ್ಟೊ ಮುರಿದಿಹ ರಾಜರು
ನಿನ್ನಯ ವಂಶದಿ ಯಾರೂ ಇಲ್ಲವು ॥ ೬೪ ॥

ಆಗಲಿ ಈಗಲೆ ಹೊರಡುವೆ ನಾನೂ
ತುಳಿಯೆನು ನಿನ್ನಯ ಬಾಗಿಲ ಎಂದೂ
ಅನ್ನುತ ಎದ್ದನು ಕೌಶಿಕ ಮುನಿವರ
ಸಿಟ್ಟಲೆ ಕಾಣುತ ಭೀಷಣ ರೂಪದಿ ॥ ೬೫ ॥

ಆಗಲೆ ಎದ್ದರು ವಸಿಷ್ಠ ಗುರುವರ
ತಡೆಯಲು ಕೌಶಿಕರಾರ್ಭಟ ಆಗಲೆ
ಹೇಳಿದರಾಗಲೆ ದಶರಥ ರಾಜಗೆ
ಬೇಡುತ ಮುನಿಗೂ ಕೂಡಲುಕ್ಷ್ಕೆಂಚವ ॥ ೬೬ ॥

ರಾಜನೆ ತಿಳಿದಿರು ಕೌಶಿಕನಿರುವೆಡೆ
ಇರುವದು ನಿಜಕೂ ಅಗ್ನಿಯ ಚಕ್ರವು
ಯಾರೇ ಇದ್ದರು ಭಯವೆನಿತಿಲ್ಲವು
ರಾಮನ ಕಳಿಸಲು ಚಿಂತೆಯು ಬೇಡಾ ॥ ೬೭ ॥

ಕೌಶಿಕ ಪಡೆದಿಹ ಬಾಣದ ಸಿದ್ಧಿಯ
ಮೀರಲು ಅವನನು ಯಾರೂ ಇಲ್ಲವು
ಬರುವಿಕೆ ಅವನದು ಸುಮ್ಮನೆ ಅಲ್ಲವು
ಕಳಿಸಲು ರಾಮನ ಇರುವದು ಶುಭವು ॥ ೬೮ ॥

ಕೇಳುತ ಎಲ್ಲವ ಮಣಿದನು ದಶರಥ
ಕರೆಸಿದ ರಾಮನ ಜೊತೆಗೇ ಲಕ್ಷ್ಮಣ
ಮಣಿದರು ಕುವರರು ಕೌಶಿಕ ಪಾದಕೆ
ಕಂಡರು ಅವರಲಿ ತೇಜದ ಪುಂಜವ ॥ ೧೯ ॥

ನಮಿಸುತ ಕುವರರು ಮಾತಾಪಿತರಿಗೆ
ಗುರುವರ ವಸಿಷ್ಠ ಭೂಸುರವರರಿಗೆ
ಹೊರಟರು ಹಿಂದೆಯೆ ಕೌಶಿಕ ಮುನಿಯು
ಧರಿಸುತ ಬಾಣವ ಬಿಲ್ಲನು ಖಡ್ಗವ ॥ ೨೦ ॥

### ೯. ವಿಶ್ವಾಮಿತ್ರರ ಸಂಗಡ ರಾಮಲಕ್ಷ್ಮಣರ ಪ್ರಯಾಣ

ಬಂದರು ಮೂವರು ಸರಯೂ ತೀರಕೆ
ಕೌಶಿಕ ಕರೆದನು ಕುವರರ ಮುಂದಕೆ
ಶುದ್ಧರು ಆಗಿರಿ ಮಂತ್ರವ ಪಡೆಯಲು
ಬಲಾ ಅತಿಬಲಾ ಮಂತ್ರವಿದ್ಯೆಗಳ ॥ ೨೧ ॥

ಮಂತ್ರದ ಫಲದಿಂ ಆಗದು ಶ್ರಮವು
ಬಾರದು ಜ್ವರವು ದಣಿಕೆಯು ಆಗದು
ಜಪಿಸುತ ಇದ್ದರೆ ಆಗದು ಹಸಿವೆಯು
ಶಸ್ತ್ರಶಾಸ್ತ್ರದಲಿ ಮೀರರು ಯಾರೂ ॥ ೨೨ ॥

ಬ್ರಹ್ಮನಿರ್ಮಿತವು ಇರುವವು ಇವುಗಳು
ನಿನ್ನನು ಬಿಟ್ಟರೆ ಯೋಗ್ಯರ ಕಾಣೆನು
ಕೇಳುತ ಎಲ್ಲವ ರಾಮನು ವಂದಿಸಿ
ಮಾಡುತಾಚಮನ ಆದನು ಶುದ್ಧನು ॥ ೨೩ ॥

ಮಂತ್ರವ ಪಡೆದನು ಬಲಾ ಅತಿಬಲಾ
ಸೇರಿತು ತೇಜವು ರಾಮನ ಕಾಯದಿ
ಉಕ್ಕಿತು ದೇಹದಿ ಶಕ್ತಿಯು ಕೆಚ್ಚು
ಮುಖದಲಿ ಉಕ್ಕಿತು ಸೂರ್ಯನ ಮೆಚ್ಚು || ೭೪ ||

ಕಳೆದರು ರಾತ್ರಿಯು ಸರಯೂ ತೀರದಿ
ಬೆಳಗಲು ಹೊರಡುತ ಬಂದರು ಒಂದೆಡೆ
ಇದ್ದಿತು ಅದುವೇ ಕಾಮಾಶ್ರಮವು
ಕೇಳಿದ ರಾಮನು ಆಶ್ರಮವಾರದು || ೭೫ ||

ಹೇಳಿದ ಮುನಿವರ ಕಾಮನ ಆಶ್ರಮ
ಇಲ್ಲಿಯೆ ಇದ್ದನು ಹಿಂದಕೆ ಕಾಮನು
ಇದ್ದಿತು ಅವನಿಗೆ ದೇಹವು ಆಗಲೆ
ರುದ್ರನ ಕೆಣಕಲು ಹೋಯಿತು ದೇಹವು || ೭೬ ||

ಅಂಗವ ತ್ಯಜಿಸುತ ಅನಂಗನಾದನು
ಕಾರಣ ಆಯಿತು ಅಂಗದೇಶವಿದು
ಶಂಕರ ಮಾಡಿದ ತಪಸಿನ ಭೂಮಿಯು
ಎನ್ನುತ ಅಲ್ಲಿಯೆ ಕಳೆದರು ಆ ದಿನ || ೭೭ ||

ಬೆಳಗಿನ ಜಾವದಿ ಹೊರಟರು ಮುಂದಕೆ
ತಲಪುತ ಗಂಗೆಯ ಏರುತ ದೋಣಿಯ
ಬಂದರು ಮಧ್ಯಕೆ ಗಂಗೆಯ ನೀರಲಿ
ಕೇಳಿತು ಆಗಲೆ ಬಿರುಸಿನ ಸಪ್ಪಳ || ೭೮ ||

ತೆರೆಗಳು ಎದ್ದವು ಆನೆಯ ತೆರದಲಿ
ನೋಡುತ ಇದನು ಕೇಳಿದ ರಾಮನು
ಏನಿದು ಗುರುಗಳೆ ಒಮ್ಮೆಲಿ ಹೀಗೆಯೆ
ಕಾರಣವಾವುದು ತಿಳಿಯದು ಎಮಗೆ || ೭೯ ||

ಕೇಳೆಲೊ ರಾಮನೆ ಇರುವದು ಪರ್ವತ
ಕರೆವರು ಅದನೇ ಕೈಲಾಸವೆಂದು
ಅಲ್ಲಿಯೆ ಇರುವದು ಸರೋವರವೊಂದು
ಬ್ರಹ್ಮನ ಮಾನಸ ಸೃಷ್ಟಿಯು ಇರುವದು || ೮೦ ||

ಕರೆವರು ಮಾನಸ ಸರೋವರವೆಂದು
ಅಲ್ಲಿಯೆ ಹುಟ್ಟುತ ಬಂದಿದೆ ಸರಯೂ
ದಾಟುತ ಅಯೋಧ್ಯೆ ಕೂಡಿದೆ ಇಲ್ಲಿಯೆ
ಗಂಗೆಯ ಕೂಡುತ ಆಗಿದೆ ಸಪ್ಪಳ || ೮೧ ||

ಪಾವನ ಸರಯೂ ಪಾವನ ಗಂಗೆಯು
ಕೂಡುತ ಇಲ್ಲಿಯೆ ಪಾವನ ಸಂಗಮ
ವಂದಿಸಿ ಸಂಗಮ ನಡೆಯಿರಿ ಮುಂದಕೆ
ಕೇಳುತ ಈ ನುಡಿ ವಂದಿಸಿ ಹೊರಟರು || ೮೨ ||

ದಾಟುತ ಗಂಗೆಯ ನಡೆದರು ಕಾಡಲಿ
ಭೀಕರ ಕಾಡದು ಹಿಂಸೆಯ ಪಶುಗಳು
ಸಿಂಹ ಹುಲಿ ಚಿರತೆ ಹಂದಿ ಆನೆಗಳು
ಹೆಜ್ಜೆಯನಿಡುವದೆ ಕಷ್ಟದ ಕೆಲಸವು || ೮೩ ||

## ೧೦.ತಾಟಕಿಯು ವನ

ರಾಮನು ಅಂದನು ಎಂತಹ ಕಾಡಿದು
ಮಾನವ ಚಲನವು ಕಾಣದು ಎಲ್ಲಿಯು
ಗುರುಗಳು ಅಂದರು ಕಾರಣ ಇರುವದು
ಇರುವದು ಇದುವೇ ತಾಟಕಿ ವನವು ||೮೪||

ಹಿಂದಕೆ ಇದ್ದನು ರಾಕ್ಷಸ ವೃತ್ರನು
ಕಾಟವ ತಾಳದೆ ಇಂದ್ರನು ಕೊಂದನು
ಇಂತೆಯೆ ಬಂದಿತು ದೋಷವು ಆಗಲೆ
ಬ್ರಹ್ಮಹತ್ಯೆಯು ಇದ್ದಿತು ಅದುವೆ ||೮೫||

ಅಂದರು ದೋಷಕೆ ಮಲವುಕುರೂಷ
ಬೆಳೆದರು ಭೂಸುರ ಸುರರೂ ಇಲ್ಲಿಯೆ
ಆಗಲೆ ಇಂದ್ರನು ಕೊಟ್ಟನು ವರವನು
ಮಲವು ಕುರೂಷ ರಾಜ್ಯವು ಬೆಳೆಯಲು ||೮೬||

ಬೆಳೆಯಿತು ರಾಜ್ಯವು ಕಂಡಿತು ಸೌಖ್ಯವು
ನಂತರ ಬಂದಳು ಯಕ್ಷಿಣಿಯೊಬ್ಬಳು
ಇದ್ದಳು ಅವಳೋ ಕಾಮರೂಪಿಣಿಯು
ಇಟ್ಟಳು ಕೊಳ್ಳೆಯ ರಾಜ್ಯದ ತುಂಬಾ ||೮೭||

ಕರೆವರು ಅವಳನು ತಾಟಕಿ ಎಂದು
ಇರುವದು ಸಾಸಿರ ಆನೆಯ ಬಲವು
ಸುಂದನ ಹೆಂಡತಿ ಮಾರೀಚನು ಮಗ
ಹೊಡೆದರು ಕೊಳ್ಳೆಯ ರಾಜ್ಯದ ತುಂಬಾ ||೮೮||

ಆಗಿದೆ ರಾಜ್ಯವು ಈ ಪರಿ ಕಾಡು
ಬರುವಳು ತಾಟಕಿ ತಿನ್ನಲು ನಮ್ಮನು
ಯೋಚನೆ ಮಾಡದೆ ವಧಿಸುತ ಆವಳನು
ಹಿಂಸೆಯು ತಪ್ಪಿಸು ನಡೆದಿಡೆ ಇನ್ನೂ || ೮೯ ||

ರಾಮನು ಕೇಳಿದ ಗುರುಗಳನಾಗಲೆ
ಕೇಳಿಹೆ ಯಕ್ಷರು ಅಲ್ಪಬಲರೆಂದು
ಪಡೆದಳು ಹೇಗದು ಸಾಸಿರ ಗಜಬಲ
ಅಂದರು ಆಗಲೆ ಗುರುಗಳು ಈ ಪರಿ || ೯೦ ||

ಯಕ್ಷನು ಇದ್ದನು ಸುಕೇತುವೆಂದು
ತಪವನು ಮಾಡುತ ಪಡೆದನು ಮಗಳನು
ಅವಳೇ ಆದಳು ತಾಟಕಿ ಎಂದು
ಬ್ರಹ್ಮನ ವರದಿಂ ಬಂದಿತು ಬಲವು || ೯೧ ||

ಆದಳು ತಾಟಕಿ ಸುಂದನ ಹೆಂಡತಿ
ಹುಟ್ಟಿದ ಅವಳಿಗೆ ಮಾರೀಚಕುವರ
ಆದನು ರಾಕ್ಷಸ ಶಾಪದ ಫಲದಿಂ
ಸುಂದನು ಸತ್ತನು ಅಗಸ್ತ್ಯ ಶಾಪದಿ || ೯೨ ||

ತಾಟಕಿ ಬಂದಳು ಸಿಟ್ಟಲೆ ಅಲ್ಲಿಗೆ
ನುಂಗುವೆ ಎನ್ನುತ ಅಗಸ್ತ್ಯರ ಮೇಲೆ
ಕೊಟ್ಟರು ಶಾಪವ ರಾಕ್ಷಸಿಯಾಗಲು
ಅಂತೆಯೆ ಶಾಪವ ಮಾರೀಚನಿಗೂ || ೯೩ ||

ಅಗಸ್ತ್ಯ ಇದ್ದಿಹ ತಾಣವು ಇದುವೇ
ತಾಟಕಿ ಹಾವಳಿ ನಡೆದಿದೆ ಇಂದಿಗು
ಬಂದರೆ ಆಕೆಯು ಧರ್ಮದ ದ್ರೋಹಿಯು
ಜನತೆಯ ಪೀಡೆಯು ಸಂಹರಿಸವಳನು ॥ ೯೪ ॥

ಜನತೆಯ ಹಿತವನು ಬಯಸುವ ನೀನು
ಜನತೆಯ ದ್ರೋಹಿಯು ತಾಟಕಿ ವಧಿಸಲು
ಅರ್ಹನು ಆಗಿಹೆ ಶಾಸ್ತ್ರಕೆ ಸಮ್ಮತ
ಕೇಳುತ ಎಲ್ಲವ ನಮಿಸಿದ ರಾಮನು ॥ ೯೫ ॥

ಹಿಡಿದನು ಬಿಲ್ಲನು ಎಡಗೈಯಿಂದಲಿ
ಮೀಟಿದ ಝಂಕರ ಅಡವಿಯ ತುಂಬ
ತಾಟಕಿ ಕೇಳುತ ಎದ್ದಳು ಉರಿಯುತ
ಬಂದಳು ಮೇಘದ ಅಬ್ಬರ ಮಾಡುತ ॥ ೯೬ ॥

ನಡೆಯಿತು ಕಲ್ಲಿನ ಮಾಯಾ ವೃಷ್ಟಿಯು
ಎರಚಿದಳಾಗಲೆ ಮಣ್ಣಿನ ಪರದೆಯ
ರಾಮನ ಬಾಣವು ಕೈಗಳ ಕಳಚಲು
ಸಿಟ್ಟಲಿ ಗರ್ಜನೆ ಮಾಡುತ ಬಂದಳು ॥ ೯೭ ॥

ಕಣ್ಣಿಗೆ ಕಾಣದ ತೆರದಲಿ ಬಂದಳು
ಕೌಶಿಕ ಹೇಳಿದ ಕರುಣೆಯು ನಡೆಯದು
ಆಗುತ ಬಂದಿದೆ ಸಂಜೆಯ ಸಮಯವು
ಸಂಜೆಯು ಕಳೆದರೆ ಗೆಲ್ಲಲು ಆಗದು ॥ ೯೮ ॥

ಕೊಡಲಿ ರಾಮನು ಬಿಟ್ಟನು ಬಾಣವ
ನೆಟ್ಟಿತು ಎದೆಯಲಿ ಬಿದ್ದಳು ಕೆಳಗೆ
ತೊಲಗಿತು ಪೀಡೆಯು ಈ ದಿನ ಶುಭವು
ಕಳೆವೆವು ರಾತ್ರಿಯ ಇಲ್ಲಿಯೆ ಇಂದು || ೯೯ ||

ಎನ್ನುತ ಕಳೆದರು ರಾತ್ರಿಯ ಅಲ್ಲಿಯೆ
ಬೆಳಗಿನ ಸಮಯದಿ ರಾಮನ ಕರೆದರು
ಈಗಲೆ ಆಗಿರಿ ಇಬ್ಬರು ಶುದ್ಧರು
ಕೊಡುವೆನು ನಿಮಗೆ ಮಂತ್ರದ ರಾಶಿಯ || ೧೦೦ ||

## ೧೦. ಅಸ್ತ್ರ ಪ್ರದಾನ

ಬಂದರು ಆಗಲೆ ಶುದ್ಧರು ಆಗುತ
ಕೊಟ್ಟನು ಅವರಿಗೆ ದಿವ್ಯಾಸ್ತ್ರಮಂತ್ರ
ದಂಡ, ಧರ್ಮ, ಕಾಲ, ವಿಷ್ಣು ಚಕ್ರಗಳ
ವಜ್ರಾಸ್ತ್ರ, ಶೂಲಾಸ್ತ್ರ, ಬ್ರಹ್ಮಾಸ್ತ್ರಗಳ || ೧೦೧ ||

ಬ್ರಹ್ಮಶಿರೋಽಸ್ತ್ರ ಐಷಿಕಾಸ್ತ್ರ
ಗದೆಗಳು ಎರಡು ಮೋದಕಿ ಶಿಖರೀ
ಧರ್ಮ, ಕಾಲ, ವರುಣ, ಪಾಶಗಳಲ್ಲದೆ
ಕೊಟ್ಟರು ಆರ್ದ್ರ ಶುಷ್ಕಾ ಶನಿಗಳ || ೧೦೨ ||

ಪೈನಾಕ, ನಾರಾಯಣ, ಶಿಖರ, ಪ್ರಥನ
ಹಯಶಿರ, ಕ್ರೌಂಚ, ಕಂಕಾಲ, ಮುಸಲ
ಕಪಾಲ ಕಂಕಣ ಅಸ್ತ್ರಗಳಲ್ಲದೆ
ಕೊಟ್ಟರು, ರುದ್ರ, ವಿಷ್ಣು ಶಕ್ತಿಗಳನು || ೧೦೩ ||

ಖಡ್ಗವು ಇದುವೇ ನಂದನವೆಂಬುದು
ತೆಗೆದುಕೊ ಗಂಧರ್ವರ ಅಸ್ತ್ರಗಳನು
ಸೌರ ಪ್ರಸ್ವಾಪನ ಮಾನವಾಸ್ತ್ರ
ಅಲ್ಲದೆ ಇವುಗಳು ಇರುವವು ಇನ್ನೂ ॥ ೧೦೪ ॥

ವರ್ಷಣ, ಶೋಷಣ, ಮಾದನ, ಮೋಹನ
ತಾಮಸ, ಸೌಮನ, ಸಂವರ್ತ, ಮೌಸಲ
ಸತ್ಯಪ್ರಶಮನ ಮಾಯಾಧರ ಶಿಶಿರ
ತ್ವಾಷ್ಟ್ರದಾರುಣ ಶೀತೇಷುವೆಂದು ॥ ೧೦೫ ॥

ಅಸ್ತ್ರಗಳೆಲ್ಲವು ಕಾಮರೂಪಿಗಳು
ಜಪಿಸುತ ಎಲ್ಲವ ಗುರುಗಳು ಕೊಟ್ಟರು
ಅಸ್ತ್ರಗಳೆಲ್ಲವ ಮಂತ್ರದ ಸಹಿತ
ಮಂತ್ರದ ದೇವತೆ ನಿಂದರು ಎದುರಿಗೆ ॥ ೧೦೬ ॥

ನಮಿಸುತ ರಾಮಗೆ ಹೊಕ್ಕರು ಹೃದಯದಿ
ತೇಜವು ಮಿಂಚಿತು ರಾಮನ ದೇಹದಿ
ರಾಮನು ಮಣಿದನು ಗುರುಗಳ ಪಾದಕೆ
ಗುರುಗಳು ಇಟ್ಟರು ತಲೆಯಲಿ ಕೈಯನು ॥ ೧೦೭ ॥

ಬೇಡುತ ಗುರುಗಳ ಕೇಳಿದ ರಾಮನು
ಗುರುಗಳೆ ಕೊಟ್ಟಿರಿ ಅಸ್ತ್ರಗಳೆಲ್ಲವ
ಆದೆನು ನಿಶ್ಚಿತ ಆಜೇಯನು ಇಂದು
ಹೇಳಿರಿ ಎಲ್ಲಕು ಉಪಸಂಹಾರವನು ॥ ೧೦೮ ॥

ಕೊಡಲೆ ಪಡೆದನು ಅವುಗಳನೆಲ್ಲವ
ಅಲ್ಲದೆ ಇನ್ನೂ ಅಸ್ತ್ರಗಳನೇಕ
ಹೇಳಿದರವರೆ ಅವನಿಗೆ ಆಗಲೆ
ಕರೆಯುತ ಅವುಗಳ ಸಂಹಾರಕಾಸ್ತ್ರ || ೧೦೯ ||

## ೧೨. ವಿಶ್ವಾಮಿತ್ರರ ಆಶ್ರಮದಲ್ಲಿ

ನಡೆಯುತ ಬಂದರು ಸಿದ್ಧಾಶ್ರಮಕೆ
ವಿಷ್ಣುವು ಮಾಡಿದ ತಪವನು ಇಲ್ಲಿಯೆ
ವಾಮನ ರೂಪದಿ ಮಾಡಿದ ನಿಜಕೂ
ಇಲ್ಲಿಯೆ ಮಾಡಿಹೆ ಎನ್ನಯ ಆಶ್ರಮ || ೧೧೦ ||

ಇಲ್ಲಿಗೆ ಬರುವರು ರಕ್ಕಸ ಪುಂಡರು
ಕೆಡಿಸಲು ಯಜ್ಞವ ಬರುವರು ಎಲ್ಲರು
ನಾಳಿನ ಜಾವದಿ ಯಜ್ಞವು ಸುರುವು
ಗುರುಗಳ ದೀಕ್ಷೆಯು ಮಾತನು ಆಡರು || ೧೧೧ ||

ಆರು ದಿನ ರಾತ್ರಿ ಕಳೆಯುವ ವರೆಗೂ
ಕಾಯಿರಿ ಯಾಗವ ರಕ್ಷಿಸಿ ಎಲ್ಲರ
ಅಂತೆಯೆ ಕಳೆದರು ಹಗಲೂ ಇರುಳೂ
ಕಳೆದವು ದಿನಗಳು ಐದೂ ರಾತ್ರಿಯು || ೧೧೨ ||

ಆರನೆ ದಿನವದು ಪೂರ್ಣಾಹುತಿಯದು
ಇದ್ದರು ಇಬ್ಬರು ಎಚ್ಚರದಿಂದಲಿ
ರಾಮನು ಹೇಳಿದ ಅನುಜಗೆ ಆಗಲೆ
ಇಂದೆಯೆ ಇರುವದು ಯುದ್ಧದ ದಿನವು || ೧೧೩ ||

ಇದ್ದರು ಇಬ್ಬರು ಸಿದ್ಧತೆಯಲ್ಲಿಯೆ
ಯಾಗದ ಹೊಗೆಯದು ಏರಿತು ಗಗನಕೆ
ಮಂತ್ರದ ರವವದು ತುಂಬಿತು ನಭದಲಿ
ಕಾಡದು ಮುಚ್ಚಿತು ಹೋಮದ ಧೂಮದಿ || ೧೧೪ ||

ಒಮ್ಮೆಲೆ ಬಂದಿತು ಭೀಕರ ಶಬ್ದವು
ಗುಡುಗಿನ ತೆರದಿಂ ಗಗನದ ತುಂಬಾ
ಬಂದರು ರಾಕ್ಷಸರಿಬ್ಬರು ಆಗಲೆ
ಭೀಕರ ಮೋಡದ ರೂಪದಿ ಕಂಡರು || ೧೧೫ ||

ಮಾರೀಚ ಸುಬಾಹು ಇದ್ದರು ಅವರು
ಬಂದಿತು ರಾಕ್ಷಸ ತಂಡವು ಹಿಂದೆಯೆ
ಚೆಲ್ಲುತ ಬಂದರು ರಕ್ತಮಾಂಸಗಳ
ರಾಮನು ಬಿಟ್ಟನು ಮಾನವಾಸ್ತ್ರವ || ೧೧೬ ||

ತಾಕಿತು ಅಸ್ತ್ರವು ಮಾರೀಚನಿಗೆ
ಹಾರಿಸಿ ಒಯ್ದಿತು ಯೋಜನ ನೂರು
ಎಚ್ಚರ ತಪ್ಪಿಸಿ ಕೆಡವಿತು ಅವನನು
ಸಾಗರ ಮಧ್ಯದಿ ಯಾರಿಗು ತಿಳಿಯದೆ || ೧೧೭ ||

ಕ್ಷಣದಲಿ ಹೂಡಿದ ಅಗ್ನಿಯ ಅಸ್ತ್ರವ
ಬಿಟ್ಟನು ಆಗಲೆ ಸುಬಾಹುವಿನೆಡೆಗೆ
ಸೀಳಿತು ಅಸ್ತ್ರವು ಎದೆಯನು ನೆಟ್ಟಗೆ
ಬಿದ್ದನು ಭೂಮಿಗೆ ಗುಡ್ಡದ ತೆರದಿಂ || ೧೧೮ ||

ನೋಡುತ ಸಾವನು ಓಡಿದರೆಲ್ಲರು
ಅಟ್ಟಿತು ಅವರನು ವಾಯುವಿನಾಸ್ತ್ರವು
ನೋಡುತ ಎಲ್ಲವ ಮುನಿವರರೆಲ್ಲರು
ಪಟ್ಟರು ಸಂತಸ ಚಿಂತೆಯ ಬಿಟ್ಟು || ೧೧೯ ||

ಮುಗಿಯಿತು ಯಾಗವು ಇಚ್ಛಿಸಿದಂತೆಯೆ
ಕಳೆದರು ಆ ದಿನ ಯಾಗದ ತಾಣದಿ
ಬೆಳಗಿವ ಜಾವದಿ ಕಾಣುತ ಕೌಶಿಕ
ಮಣಿದರು ಅವರಿಗೆ ಭಕ್ತಿಯ ಭಾವದಿ || ೧೨೦ ||

ಪಾವನ ಗುರುಗಳೆ ಅಪ್ಪಣೆ ಕೊಡಿರಿ
ಸಿದ್ಧರು ಇರುವೆವು ಇಚ್ಛೆಯ ಪೂರ್ತಿಗೆ
ಅಂದರು ಗುರುಗಳು ನಗುತಲಿ ಹರ್ಷದಿ
ಕೇಳೆಲೊ ರಾಮನೆ ತೃಪ್ತನು ನಾನು || ೧೨೧ ||

ಬಂದಿದೆ ಜನಕನ ಪತ್ರವು ಒಂದು
ಮಿಥಿಲೆಯ ಅಧಿಪತಿ ಕರೆದಿಹ ಇಂದು
ಮಾಡಲು ನೋಡಲು ಯಾಗವ ಅವನದು
ಅಲ್ಲಿದೆ ಧನುವದು ಶಿವನದು ಒಂದು || ೧೨೨ ||

ಇರುವದು ಅದುವೇ ಅದ್ಭುತ ಧನುವು
ಯಜ್ಞದ ಸಮಯದಿ ಸಿಕ್ಕಿದೆ ಅವನಿಗೆ
ಕೊಟ್ಟರು ಬಿಲ್ಲನು ದೇವರು ಎಲ್ಲರು
ಇರುವದು ಭವ್ಯವು ಬೆಳಕಿನ ಸಹಿತ || ೧೨೩ ||

ಬಿಲ್ಲಿನ ಹೆದೆಯನು ಏರಿಸಲಾಗದು
ದೇವಗಂಧರ್ವ ಅಸುರರು ಕೂಡ
ಬಿಟ್ಟರು ಎಷ್ಟೋ ರಾಜರು ಯತ್ನಿಸಿ
ನೋಡುವ ಸಮಯವು ಬಂದಿದೆ ಈಗಲೆ || ೧೨೪ ||

ಹಿಂದಕೆ ಜನಕನು ಮಾಡಿದ ಯಜ್ಞಕೆ
ತೃಪ್ತಿಯ ಕಾಣಿಕೆ ಬಿಲ್ಲನು ಕೊಟ್ಟರು
ಯಜ್ಞದ ಫಲವನು ಬಿಲ್ಲಿನ ರೂಪದಿ
ಇಂದಿಗು ಪೂಜಿಪ ದೇವನ ತೆರದಿ || ೧೨೫ ||

## ೧೩. ಮಿಥಿಲಾನಗರಕ್ಕೆ ಪ್ರಯಾಣ

ಎನ್ನುತ ಗುರುಗಳು ಹೊರಟರು ಮಿಥಿಲೆಗೆ
ಜೊತೆಯಲಿ ನಡೆದರು ರಾಮಲಕ್ಷ್ಮಣರು
ಋಷಿಗಣ ಹೊರಟಿತು ಸಂಭ್ರಮದಿಂದಾ
ಅಂದಿಗೆ ಉಳಿದರು ಶೋಣಾ ತೀರದಿ || ೧೨೬ ||

ರಾಮನು ನೋಡಿದ ಆಶ್ರಮ ಸುತ್ತಲು
ಇದ್ದಿತು ಅದುವೇ ಸುಂದರ ವನವು
ಕೇಳಿದ ಗುರುಗಳ ವನಸಿರಿ ಬಗೆಗೆ
ಅಂದರು ಗುರುಗಳು ಕಥೆಯಿದೆ ಇದಕೆ || ೧೨೭ ||

## ೧೪. ವಿಶ್ವಾಮಿತ್ರನ ವಂಶ

ಹಿಂದಕೆ ಇದ್ದನು ಬ್ರಹ್ಮನ ಪುತ್ರನು
ಮಾನಸಜನಿತನು ಹೆಸರದು ಕುಶಾಂಬ
ಇದ್ದರು ಅವನಿಗೆ ನಾಲ್ವರು ತನುಜರು
ಅವರಲಿ ಇದ್ದನು ಕುಶನಾಭನೊಬ್ಬ || ೧೨೮ ||

ಅವನಿಗೆ ಹೆಂಡತಿ ಘೃತಾಚಿಯೆಂದು
ಅವರಲಿ ಹುಟ್ಟಿದ ಮಕ್ಕಳು ನೂರು
ಇದ್ದರು ಎಲ್ಲರು ಪೆಣ್ಗಳು ಮಾತ್ರ
ಒಂದೂ ಗಂಡೂ ಹುಟ್ಟಲೆ ಇಲ್ಲವು ॥ ೧೨೯ ॥

ಬೆಳೆದರು ಸುಂದರ ಯೌವನಿ ಎಲ್ಲರು
ಆಡುತಲಿದ್ದರು ಎಲ್ಲರು ವನದಲಿ
ವಾಯುವು ಕಂಡನು ಸುಂದರ ಅವರನು
ಮೋಹವು ಮುಚ್ಚಿತು ಅವನನು ಆಗಲೆ ॥ ೧೩೦ ॥

ಕೇಳಿದ ಅವರನು ಪತ್ನಿಯರಾಗಲು
ನಕ್ಕರು ಅಂದರು ಕೇಳೆಲೊ ತಂದೆಯು
ಕೇಳುತ ಈ ಪರಿ ವಾಯುವು ಉರಿದನು
ಸಿಟ್ಟಲೆ ಹೊಕ್ಕನು ದೇಹವ ಅವರಲಿ ॥ ೧೩೧ ॥

ಸೆಳೆಯುತ ಗಾಳಿಯು ದೇಹವ ಕುಗ್ಗಿಸಿ
ಮಾಡಿದ ಅವರನು ಕುಬ್ಜೆಯ ರೂಪದಿ
ಅಳುತಲಿ ಎಲ್ಲರು ಬಂದರು ಮನೆಗೆ
ಹೇಳಿದರೆಲ್ಲವ ತಂದೆಯು ಎದುರಿಗೆ ॥ ೧೩೨ ॥

ಕೇಳುತ ಎಲ್ಲವ ಕಂಬನಿ ಮಿಡಿದನು
ಆಗಲಿ ಮಕ್ಕಳೆ ಚಿಂತೆಯು ಬಿಡಿರಿ
ನೋಡುವೆ ಉತ್ತಮ ವರವನು ನಿಮಗೆ
ಮಾಡುವೆ ಯತ್ನವ ಎಲ್ಲಿಯು ಬಿಡದಲೆ ॥ ೧೩೩ ॥

ಇದ್ದನು ಒಬ್ಬನು ಋಷಿವರ ಚೂಲಿಯು
ಪಡೆದನು ಪುತ್ರನ ಮಾನಸ ತಪದಲಿ
ತಾಯಿಯು ಆದಳು ಸೋಮದೆಯೆಂದು
ಪುತ್ರನ ಹೆಸರದು ಬ್ರಹ್ಮದತ್ತನು || ೧೩೪ ||

ಕಾಂಪಿಲ್ಯಕಾದನು ರಾಜನು ಆತನು
ಕೊಟ್ಟನು ಅವನಿಗೆ ಮಕ್ಕಳ ಕುಶನು
ಸ್ಪರ್ಶದ ಜೊತೆಗೆ ಹೋಯಿತು ಕುಬ್ಜವು
ಆದರು ಎಲ್ಲರು ಸುಂದರ ಸ್ತ್ರೀಯರು || ೧೩೫ ||

ಕುಶನಾಭನಾದ ಸಂತಸ ಮೂರ್ತಿಯು
ಬಿಟ್ಟಿತು ಚಿಂತೆಯು ಕುವರಿಯರೆಲ್ಲರ
ಆದರು ಕುವರನು ಇಲ್ಲದ ಕಾರಣ
ಇದ್ದಿತು ಚಿಂತೆಯು ಕುವರನ ಬಗೆಗೇ || ೧೩೬ ||

ಪುತ್ರಕಾಮೇಷ್ಟಿ ಯಾಗವ ಮಾಡಿದ
ಪಡೆದನು ಮಗನನು ಕರೆದರು 'ಗಾಧಿ'ಯು
ಅವನೇ ಎನ್ನಯ ತಂದೆಯು ರಾಮನೆ
ಕುಶನಿಗೆ ವಂಶಜ ಆದೆನು ಕೌಶಿಕ || ೧೩೭ ||

ಎನ್ನುತ ಹೇಳಿದ ತನ್ನಯ ಕತೆಯನು
ಕೇಳುತ ಎಲ್ಲರು ಆದರು ಮುಗ್ಧರು
ರಾತ್ರಿಯು ಕಳೆಯಿತು ಮೊದಲಿನ ಅರ್ಧವು
ಮಲಗಿದರೆಲ್ಲರು ನೆನೆಯುತ ಕಥೆಯನು || ೧೩೮ ||

ಹುಂಜದ ಕೂಗನು ಕೇಳುತ ಎಲ್ಲರು
ಹೊರಟರು ಮುಂದಿನ ಪಯಣಕೆ ನದಿಗೆ
ದಾಟುತ ಶೋಣೆಯ ಬಂದರು ಗಂಗೆಗೆ
ಆಗಲೆ ಸೂರ್ಯನು ನೆತ್ತಿಯ ಮೇಲಕೆ || ೧೩೯ ||

ನೋಡುತ ಗಂಗೆಯ ಆಯಿತು ಸಂತಸ
ಸ್ನಾನವ ತೀರಿಸಿ ತರ್ಪಣ ಕೊಡುತಲಿ
ಕುಳಿತಿಹ ಗುರುಗಳ ನೋಡುತ ಕೇಳಿದ
ಗಂಗೆಯ ವಿಷಯವ ಕೇಳಲು ಆಶೆಯು || ೧೪೦ ||

## ೧೫. ಗಂಗೆಯ ಕತೆಯು

ಇರುವನು ಪರ್ವತರಾಜನು ಒಬ್ಬನು
ಕರೆವರು ಅವನನು ಹಿಮವಂತನೆಂದು
ಅವನಿಗೆ ಮೇನೆಯು ಸತಿಯುಳು ಇದ್ದೊ
ಇರುವಳು ಆಕೆಯು ಮೇರುಪುತ್ರಿಯೂ || ೧೪೧ ||

ಅವರಿಗೆ ಇರುವರು ಕುವರಿಯರಿಬ್ಬರು
ಮೊದಲನೆ ಮಗಳೇ ಇರುವಳು ಗಂಗೆಯು
ಎರಡನೆಯವಳೇ ಇರುವಳು ಉಮೆಯು
ಗಂಗೆಯು ಇರುವಳು ಸ್ವೇಚ್ಛಾಗಮನೆಯು || ೧೪೨ ||

ದೇವರು ಎಲ್ಲರು ಗಂಗೆಗೆ ಬೇಡುತ
ಒಯ್ದರು ಅವಳನು ಲೋಕದ ಹಿತಕೆ
ಮೂರೂ ಲೋಕಕೆ ಹಿತವಳು ಗಂಗೆಯು
ಪಾವನಪೂತಳು ಪಾಪವಿನಾಶಿನಿ || ೧೪೩ ||

ಉಮೆಯು ಮಾಡುತ ತಪವನು ಸಿದ್ಧಿಸಿ
ಪಡೆದಳು ಶಿವನನು ಪತಿಯನು ಎಂದು
ಆದಳು ಮಾತೆಯು ಲೋಕಕೆ ಅವಳು
ಗಂಗೆಯು ಸುರನದಿ ಪಾಪನಾಶಿನಿಯು || ೧೪೪ ||

ಶಂಕರ ಉಮೆಯರು ಮದುವೆಯ ನಂತರ
ಕಳೆದರು ವರ್ಷವ ನೂರನು ಸುಖಿಸುತ
ಆದರು ಪುತ್ರನು ಜನಿಸಲೆ ಇಲ್ಲವು
ಈಶ್ವರ ತೇಜವು ಉರಿಯುವ ಬೆಂಕಿಯು || ೧೪೫ ||

## ೧೬. ಸ್ಕಂದನ ಜನನ

ದೇವರು ಎಲ್ಲರು ಚಿಂತಿಸಿ ಅಂದರು
ಈಶ್ವರ ತೇಜವ ಧರಿಸುವರಾರು
ಬೇಡಿದರವನಿಗೆ ಎಲ್ಲರು ಕೂಡಿ
ವೇದದ ತಪದಲಿ ನಿರತನು ಆಗಲು || ೧೪೬ ||

ಕೇಳುತ ಬೇಡಿಕೆ ದೇವರು ಎಲ್ಲ
ಶಂಕರ ಧರಿಸಿದ ತೇಜವ ತನ್ನಲಿ
ಉದುರಿದ ತೇಜವು ಕಣವದು ಇದ್ದರು
ತುಂಬಿತು ಜಗವನು ಎಲ್ಲೆಡೆಯಲ್ಲಿಯು || ೧೪೭ ||

ಅಗ್ನಿಯು ನುಂಗಿದ ತೇಜದ ಕಣವನು
ಆಯಿತು ಅದುವೇ ಶ್ವೇತದ ಪರ್ವತ
ಆಗಲೆ ಬೆಳೆಯಿತು ದರ್ಭೆಯ ವನವು
ಅಲ್ಲಿಯೆ ಹುಟ್ಟಿದ ಷಣ್ಮುಖ ಬೆಂಕಿಲಿ || ೧೪೮ ||

ಕೇಳುತ ಈ ಪರಿ ಉರಿದಳು ಉಮೆಯು
ಮಕ್ಕಳ ಇಚ್ಛೆಯು ಬತ್ತಿತು ಅವಳದು
ಕೊಟ್ಟಳು ಶಾಪವ ದೇವತೆ ಗಣವೇ
ಕೇಳಿರಿ ಎಲ್ಲರು ಎನ್ನಯ ಶಾಪವ || ೧೪೯ ||

ಎನ್ನುತ ನೀರನು ಕೈಯಲಿ ಹಿಡಿದು
ಮಕ್ಕಳ ಇಚ್ಛೆಯ ಕಡಿದಿರಿ ನೀವು
ನಿಮ್ಮಯ ಸತಿಯರು ಬಂಜೆಯರಾಗಲಿ
ಪೃಥ್ವಿಯ ಕಡೆಗೇ-ತಿರುಗುತ ಅಂದಳು || ೧೫೦ ||

ಮಕ್ಕಳ ಸುಖವದು ಲಭಿಸದೆ ಹೋಗಲಿ
ಪತಿಗಳು ಆಗಲಿ ಇನ್ನೂ ಹಲವು
ದೇವರು ಎಲ್ಲರು ಆದರು ದುಃಖಿತ
ಶಂಕರ ನಿಂತನು ತಪದಲಿ ನಿರತ || ೧೫೧ ||

ಆಯಿತು ಇದುವೇ ಉಮೆಯದು ಕತೆಯು
ಗಂಗೆಯ ಕತೆಯನು ಕೇಳಿರಿ ಮುಂದೆಯೆ
ಅಗ್ನಿಯು ನುಂಗಿದ ತೇಜದ ಕಣವದು
ಸುಟ್ಟಿತು ಅವನನು ತಾಳನು ಆದನು || ೧೫೨ ||

ಅಂದನು ದೇವರು ಎಲ್ಲರ ಎದುರಿಗೆ
ತಡೆಯೆನು ತೇಜವ ಮಾಡುವದೇನದು
ಎನ್ನಲು ಎಲ್ಲರು ಬೇಡುತ ಗಂಗೆಗೆ
ಧರಿಸಲು ತೇಜವ ಕೇಳಿದರೆಲ್ಲರು || ೧೫೩ ||

ಒಪ್ಪುತ ಗಂಗೆಯು ಧರಿಸಿದಳದನು
ಗಂಗೆಯು ಉಕ್ಕಿತು ಧರಿಸಲು ಆಗದು
ದೇವರು ಅಂದರು ಚೆಲ್ಲಲು ಅದನು
ಹಿಮಗಿರಿ ಬದಿಯಲಿ ಬಿಟ್ಟಳು ಅವಳು || ೧೫೪ ||

ತೇಜದ ಭಾಗವು ಆಯಿತು ಚಿನ್ನವು
ಕಾವಿನ ಭಾಗವು ಬೆಳ್ಳಿಯು ತಾಮ್ರವು
ಆಯಿತು ಎಷ್ಟೋ ಕಬ್ಬಿಣ ಕೂಡಾ
ಕಶ್ಮಲ ಭಾಗವು ತವರವು ಸೀಸವು || ೧೫೫ ||

ಹೀಗೆಯೆ ತೇಜದ ಫಲದಿಂ ಹುಟ್ಟುತ
ಲೋಹಗಳೆಲ್ಲವು ತುಂಬುತ ಜಗದಲಿ
ದರ್ಭೆಯ ವನದಲಿ ಬಿದ್ದಿಹ ತೇಜವು
ಆಯಿತು ಮಗುವದು ಸ್ಕಂದನು ಎಂದು || ೧೫೬ ||

ಕೃತ್ತಿಕೆ ಅವನಿಗೆ ಉಣಿಸುತ ಮೊಲೆಯನು
ಆದನು ಅವನೇ ಕಾರ್ತಿಕೇಯನು
ಇದ್ದರು ಕೃತ್ತಿಕೆ ಆರೂ ಸ್ತ್ರೀಯರು
ಹಾಲನು ಕುಡಿಯುತ ಒಮ್ಮೆಲೆ ಅವನು || ೧೫೭ ||

ಬೆಳಸಿದ ಮುಖಗಳ ಆರನು ಒಮ್ಮೆಲೆ
ಆದನು ಆಗಲೆ ಷಡಾನನನಾಗಿ
ಮಾಡಿದರವನನು ದೇವಸೇನಾನಿಯ
ಗೆದ್ದನು ಸ್ಕಂದನು ದೈತ್ಯರ ಸೈನ್ಯವ || ೧೫೮ ||

ಎನ್ನುತ ಗಂಗೆಯ ಕತೆಯನು ಹೇಳುತ
ಸ್ಕಂದನ ಕತೆಯೂ ಬಂದಿತು ಕೂಡಾ
ಗಂಗೆಯ ಕತೆಯದು ಹೊಂದಿದೆ ಇನ್ನೂ
ನಿನ್ನಯ ವಂಶದ ಸಗರನ ಜೊತೆಗೆ || ೧೪೯ ||

## ೧೭. ಸಗರನ ಕತೆಯು

ಎನ್ನುತ ಹೇಳಿದ ಸಗರನ ಕತೆಯನು
ಹಿಂದಕೆ ಇದ್ದನು ಸಗರನು ಅಧಿಪತಿ
ನಿಮ್ಮಯ ಅಯೋಧ್ಯೆ ಅವನದು ತಾಣವು
ಅವನಿಗೆ ಹೆಂಡಿರು ಕೇಶಿನಿ ಸುಮತಿಯು || ೧೫೦ ||

ಸಂತತಿ ಹೊಂದಲು ಮಾಡಿದ ತಪಸನು
ಕಳೆದನು ಹಾಗೆಯೆ ವರುಷ ಶತವನು
ಭೃಗುಮುನಿ ಕೊಟ್ಟರು ವರವನು ಮಕ್ಕಳ
ಕೇಳೆಲೊ ರಾಜನೆ ವರವದು ಹೀಗಿದೆ || ೧೫೧ ||

ಒಬ್ಬಳು ಪಡೆಯುತ ಒಬ್ಬನು ಪುತ್ರನ
ವಂಶಕೆ ಕೀರ್ತಿಯ ಅಂಶನು ಅವನು
ಇತರಳು ಪಡೆದು ಅರವತ್ತು ಸಾವಿರ
ಶೂರರು ವೀರರು ಕೀರ್ತಿಶಾಲಿಗಳು || ೧೫೨ ||

ಕೇಶಿನಿ ಪಡೆದಳು ಒಬ್ಬನು ಮಗನನು
ಕರೆದರು ಅವನನು ಅಸಮುಂಜನೆಂದು
ಸುಮತಿಯು ಪಡೆದಳು ಗರ್ಭದ ಪಿಂಡವ
ಆದವು ಶಿಶುಗಳು ಸಹಸ್ರ ಷಡ್ದಶ || ೧೫೩ ||

ಇಟ್ಟರು ಸಹಸ್ರ ಷಡ್ದಶ ಶಿಶುಗಳ
ತುಪ್ಪದ ಕೊಡದಿ ಅವುಗಳನ್ನೆಲ್ಲವ
ಕಾಲದ ಕ್ರಮದಿ ಆದರು ಹುಡುಗರು
ಸಗರಗೆ ಆಯಿತು ಮಕ್ಕಳ ಸೈನ್ಯವು ॥ ೧೬೪ ॥

ಅಸಮಂಜಾದನು ಜನತೆಗೆ ಪೀಡಕ
ಸಗರನು ಹಾಕಿದ ದೇಶದ ಹೊರಗೆ
ಇದ್ದನು ಅವನಿಗೆ ಪುತ್ರನು ಒಬ್ಬನು
ಕರೆದರು ಅವನನು ಅಂಶುಮಂತನು ॥ ೧೬೫ ॥

ಹಿಮವತ್ ಪರ್ವತ ಎದುರಿಗೆ ವಿಂಧ್ಯವು
ನಡುವಿನ ದೇಶವು ಆರ್ಯಾವರ್ತವು
ಇಲ್ಲಿಯೆ ಮಾಡಿದ ಸಗರನು ಯಜ್ಞವ
ಆಯಿತು ಅದುವೆ ಸಾಗರ ಕಾರಣ ॥ ೧೬೬ ॥

ಬಿಟ್ಟರು ಯಜ್ಞದ ಕುದುರೆಯನಾಗಲಿ
ಹಿಂದೆಯೆ ಹೊರಟನು ಅಂಶುಮಂತನು
ರಕ್ಷಣೆ ಮಾಡುತ ರಾಜ್ಯವ ಬೆಳೆಸುತ
ಇಂದ್ರನು ತಡೆಯದೆ ಕದಿದನು ಕುದುರೆಯ ॥ ೧೬೭ ॥

ಕಳಿಸಿದ ಸಗರನು ಮಕ್ಕಳನೆಲ್ಲರ
ಹುಡುಕಲು ಯಜ್ಞದ ಕುದುರೆಯು ಹೋದಲು
ಇಂದ್ರನ ಮಾಯದಿ ಕುದುರೆಯು ಕಾಣದು
ಹುಡುಕಿದರೆಲ್ಲರು ಭೂಮಿಯ ಅಗಿಯಲು ॥ ೧೬೮ ॥

ಜಂಬೂದ್ವೀಪದಿ ಅಗಿದರು ಭೂಮಿಯ
ಷಡ್ದಶಸಾಪಿರ ಯೋಜನ ಆಳದಿ
ಆದರು ಎಲ್ಲರು ಭೀತಿಯ ತಾಳುತ
ಇಟ್ಟರು ಮೊರೆಯನು ಬೊಮ್ಮನ ಕಡೆಗೆ ॥ ೧೬೯ ॥

ಅಂದನು ಬೊಮ್ಮನು ಚಿಂತಿಸಬೇಡಿರಿ
ಪೃಥ್ವಿಯು ಸೇರಿದೆ ವಾಸುದೇವನಿಗೆ
ಈಗಲೆ ಇರುವನು ಕಪಿಲನ ರೂಪದಿ
ಭೂಮಿಯ ಉಳಿಸುವ ಚಿಂತೆಯು ಬೇಡಾ ॥ ೧೭೦ ॥

ಸಗರನ ಮಕ್ಕಳು ಕಡಿದರು ಭೂಮಿಯ
ಹೊಕ್ಕರು ಹಾಗೆಯೆ ಕೆಳಗಿನ ಲೋಕವ
ಅಲ್ಲಿಯೆ ಇದ್ದನು ಕಪಿಲನು ಋಷಿವರ
ಹತ್ತಿರ ಇದ್ದಿತು ಕುದುರೆಯು ಯಜ್ಞದ ॥ ೧೭೧ ॥

ತಿಳಿದರು ಎಲ್ಲರು ಅವನೇ ಕಳ್ಳನು
ಹೋದರು ಎಲ್ಲರು ಅವನಿಗೆ ಹೊಡೆಯಲು
ತಿಳಿಯರು ಇಂದ್ರನ ಮಾಯವ ಅವರು
ಬಿಟ್ಟಿಹ ಕುದುರೆಯ ಅಲ್ಲಿಯೆ ಇಂದ್ರನು ॥ ೧೭೨ ॥

ನೋಡುತ ಎಲ್ಲರ ಹೊಡೆಯಲು ಬರುತಿಹ
ಷಹಸ್ರಷಷ್ಟಿಯ ಸಗರನ ಪುತ್ರರ
ಸಿಟ್ಟಲೆ ನೋಡುತ ಅವರನು ಆಗಲೆ
ಮಾಡಿದ ಎಲ್ಲರ ಬೂದಿಯ ರಾಶಿಯ ॥ ೧೭೩ ॥

ಇತ್ತಲಿ ಯಾಗದಿ ಕುಳಿತಿಹ ಸಗರನು
ಸುದ್ದಿಯ ತಿಳಿಯದೆ ಮಕ್ಕಳ ಬಗೆಯನು
ಕಳಿಸಿದ ಮೊಮ್ಮಗ ಅಂಶುಮಂತನನು
ತಿಳಿಯಲು ಕುದುರೆಯ ಮಕ್ಕಳ ಬಗೆಯನು || ೧೭೪ ||

ನಡೆದನು ಅಂಶುವು ಕಡಿದಿಹ ಹಾದಿಗೆ
ಮುಟ್ಟಿದ ಹಾಗೆಯೆ ಕೆಳಗಿನ ಲೋಕವ
ನೋಡಿದ ಅಲ್ಲಿಯೆ ಭಸ್ಮದ ರಾಶಿಯ
ತಿಳಿದನು ಎಲ್ಲರು ಹೊಂದಿದ ಗತಿಯನು || ೧೭೫ ||

ದುಃಖವು ತುಂಬಿತು ಅತ್ತನು ತಡೆಯದೆ
ಕಂಡಿತು ಅಲ್ಲಿಯೆ ಮೇಯುವ ಕುದುರೆಯು
ಮೃತರಿಗೆ ತರ್ಪಣ ಜಲವನು ಹುಡುಕಿದ
ಆಗಲೆ ಬಂದನು ಸಗರನ ಶಾಲಕ || ೧೭೬ ||

ಹೆಸರದು ಅವನದು ಗರುಡನು ಎಂದು
ಹಾರುತ ಬಂದನು ವಾಯುವೇಗದಲಿ
ಅಂಶುವೆ ದುಃಖಿಸ ಬೇಡೆಲೊ ನೀನು
ಆಗಿದೆ ಈ ವಧೆ ಲೋಕದ ಹಿತಕ || ೧೭೭ ||

ಸಹಜದ ತರ್ಪಣ ಸಲ್ಲದು ಅವರಿಗೆ
ಗಂಗೆಯು ಹರಿದರೆ ಬೂದಿಯ ಮೇಲೆ
ಕಪಿಲನ ಸಿಟ್ಟಿಗೆ ಉರಿದಿಹ ಅವರಿಗೆ
ಸಿಗುವದು ಸ್ವರ್ಗವು ನಿಶ್ಚಿತ ಆಗಲೆ || ೧೭೮ ||

ಈಗಲೆ ಒಯ್ಯುತ ಯಜ್ಞದ ಕುದುರೆಯ
ಯಾಗವ ಮುಗಿಸಲು ತಿಳಿಸೆಲೊ ಸಗರಗೆ
ಎನ್ನುತ ಹೇಳಿದ ಗರುಡನ ಮಾತನು
ಒಪ್ಪುತ ನಡೆದನು ಕುದುರೆಯ ಜೊತೆಗೆ || ೧೭೯ ||

ಕೇಳುತ ಎಲ್ಲವ ದುಃಖದಿ ಸಗರನು
ಮುಗಿಸಿದ ಯಾಗವ ರಾಜನು ಆಗಲೆ
ಗಂಗೆಯ ಭೂಮಿಗೆ ತರುವದು ತಿಳಿಯದೆ
ಆಳಿದ ಮೂವತ್ತುಸಾವಿರ ವರ್ಷ || ೧೮೦ ||

## ೧೮. ಗಂಗಾವತರಣ

ನಂತರ ಬಂದನು ಅಂಶುವು ಪಟ್ಟಕೆ
ಅವನಿಗು ಆಗದು ಗಂಗೆಯ ತರಲಿಕೆ
ನಂತರ ಬಂದನು ದಿಲೀಪ ರಾಜನು
ಅವನಿಗೆ ಹುಟ್ಟಿದ ಭಗೀರಥ ಕುವರ || ೧೮೧ ||

ರಾಜ್ಯವ ಒಪ್ಪಿಸಿ ಸಚಿವರ ಕಡೆಗೆ
ಭಗೀರಥ ನಡೆದ ಗೋಕರ್ಣಕೆ ತಾ
ಮಾಡಿದ ತಪವನು ಸಾಸಿರ ವರುಷವ
ಪಡೆವನು ವರವನು ಗಂಗೆಯ ತರಲು || ೧೮೨ ||

ಬ್ರಹ್ಮನು ಒಪ್ಪಿದ ಆದರೆ ಗಂಗೆಯು
ಬರುವಳು ರಭಸದಿ ಸ್ವರ್ಗದಿ ಭೂಮಿಗೆ
ತಡೆಯಲು ಆಗದು ಭೂಮಿಗೆ ಅವಳನು
ಪ್ರಾರ್ಥಿಸು ಶಿವನನು ಧರಿಸಲು ಜಡೆಯಲಿ || ೧೮೩ ||

ತಪವನು ನಡೆಸಿದ ಶಂಕರನೊಲಿಸಲು
ಒಪ್ಪಿದ ಶಂಕರ ಪ್ರೀತನು ಆಗುತ
ಗಂಗೆಯು ಸೊಕ್ಕಿಲೆ ಇಳಿದಳು ರಭಸದಿ
ತಿಳಿದಳು ಶಂಕರ ಕುಸಿಯುವನೆಂದು || ೧೮೪ ||

ಅರಿಯುತ ಶಂಕರ ಗಂಗೆಯ ಸೊಕ್ಕನು
ಅಡಗಿಸಿದವಳನು ತನ್ನಯ ಜಡೆಯಲಿ
ಒಂದೂ ಹನಿಯದು ಬಾರದು ಹೊರಗೆ
ಸುತ್ತಿದಳಲ್ಲಿಯೆ ಜಡೆಯಲಿ ಒಳಗೇ || ೧೮೫ ||

ನೋಡುತ ಎಲ್ಲವ ಭಗೀರಥನಾಗಲೆ
ಬೇಡಿದ ಶಿವನಿಗೆ ಗಂಗೆಯ ಬಿಡಲು
ನಗುತಲಿ ಶಂಕರ ಬಿಟ್ಟನು ಹನಿಯನು
ಸುರಿದಳು ಗಂಗೆಯು ಏಳು ಪ್ರವಾಹದಿ || ೧೮೬ ||

ಹ್ಲಾದಿನಿ, ಪಾವನಿ, ನಲಿನೀ, ಪೂರ್ವಕೆ
ಸುಚಕ್ಷು, ಸೀತಾ, ಸಿಂಧು ಪಶ್ಚಿಮಕೆ
ಅಲಕನಂದೆಯು ಭಗೀರಥನೊಡನೆ
ಇಳಿಯುವ ಸಪ್ತಳ ತುಂಬಿತು ಜಗದಲಿ || ೧೮೭ ||

ರಾಜನು ಹೊರಟನು ಮುಂದಕೆ ಮುಂದಕೆ
ಗಂಗೆಯು ಹೊರಟಳು ಹಿಂದೆಯೆ ಹಿಂದೆಯೆ
ಈಶ್ವರ ಶಿರದಿಂ ಇಳಿದಿಹ ಗಂಗೆಯು
ಪಾವನ ತೀರ್ಥಗಳು ಮಿಂದರು ಎಲ್ಲರು || ೧೮೮ ||

ಬರುತಲಿ ಹಾಗೆಯೆ ಬಂದರು ಯಜ್ಞಕೆ
ಮಾಡುತಲಿದ್ದನು ಜಹ್ನುವು ಅದನು
ಮಹಾತ್ಮ ತಾಪಸಿ ಸಿದ್ಧನು ಅವನು
ಗಂಗೆಯು ಸೊಕ್ಕಿಗೆ ತೇಲಿತು ಎಲ್ಲವು || ೧೮೯ ||

ಜಹ್ನುವು ಸಿಟ್ಟಲೆ ಕುಡಿದನು ಗಂಗೆಯ
ಅಡಗಿತು ಸೊಕ್ಕದು ಕೂಡಲೆ ಅವಳದು
ಎಲ್ಲರ ಬೇಡಿಕೆ ಕೇಳುತ ಅವನು
ಕ್ಷಮಿಸುತ ಅವಳನು ಬಿಟ್ಟನು ಕಿವಿಯಿಂ || ೧೯೦ ||

ಹೀಗೆಯೆ ಆದಳು ಜಹ್ನುಗೆ ಮಗಳು
ಕರೆದರು ಅವಳನು ಜಾಹ್ನವಿಯೆಂದು
ಬಂದಳು ಆವಳು ಭಗೀರಥ ಯತ್ನದಿ
ಆದಳು ಆದಕೇ ಭಾಗೀರಥಿಯು || ೧೯೧ ||

ಕೂಡಲೆ ಹೋದರು ಕೆಳಗಿನ ಲೋಕಕೆ
ಗಂಗೆಯು ಹರಿದಳು ಬೂದಿಯ ಮೇಲೆ
ಆಯಿತು ಸದ್ಗತಿ ಸಗರನ ವಂಶಕೆ
ಇಂತಿದೆ ಗಂಗೆಯ ಪಾವನ ಚರಿತೆಯು || ೧೯೨ ||

## ೧೯. ಸಮುದ್ರ ಮಂಥನ

ಮರುದಿನ ಹೊರಟರು ಗಂಗೆಯ ದಾಟುತ
ಮುಟ್ಟಿದರೆಲ್ಲರು ವಿಶಾಲ ನಗರವ
ರಾಮನು ಕೇಳಿದ ನಗರದ ವಿಷಯವ
ಗುರುಗಳು ಅಂದರು ಆದಕೂ ಕತೆಯಿದೆ || ೧೯೩ ||

ಹಿಂದಕೆ ಇದ್ದರು ಕಶ್ಯಪ ಸತಿಯರು
ಕರೆದರು ಅವರನು ದಿತಿ ಅದಿತಿಯೆಂದು
ಮಕ್ಕಳು ಅವರಿಗೆ ಬಹುಬಲವಂತರು
ಅದಿತಿಯ ಮಕ್ಕಳು ಸಾತ್ವಿಕರಿದ್ದರು ॥ ೧೯೪ ॥

ಮರಣವ ಮುಪ್ಪನು ರೋಗವ ಗೆದೆಯಲು
ಕಡೆದರು ಎಲ್ಲರು ಹಾಲಿನ ಸಾಗರ
ಹಗ್ಗವು ಆಯಿತು ವಾಸುಕಿ ಸರ್ಪವು
ಕಡೆಗೋಲಾಯಿತು ಮಂದರ ಪರ್ವತ ॥ ೧೯೫ ॥

ವಾಸುಕಿ ತಡೆಯದೆ ಕಕ್ಕಿದ ವಿಷವನು
ಕಚ್ಚಿತು ಬಂಡೆಯು ಕಡೆಯುವ ಸಮಯದಿ
ಉಕ್ಕಿತು ಆಗಲೆ ಹಾಲಾಹಲವು
ವಿಷವದು ಘೋರವು ಲೋಕವ ಸುಡುವದು ॥ ೧೯೬ ॥

ಎಲ್ಲರು ಹೊಕ್ಕರು ಶಿವನಿಗೆ ಮೊರೆಯನು
ಬೇಡಿದರವನಿಗೆ ರಕ್ಷಣೆ ನೀಡಲು
ವಿಷ್ಣುವು ಬಂದನು ಬೇಡಿದ ಶಿವನಿಗೆ
ಅಂದನು ಅವನಿಗೆ ಮೊರೆಯನು ಕೇಳಲು ॥ ೧೯೭ ॥

ರುದ್ರನೆ ಇರುತಿಹೆ ದೇವೇಶ್ವರ ನೀ
ಕಡೆಯಲು ಹುಟ್ಟಿದ ಮೊದಲನೆ ಫಲವು
ನಿನಗೇ ಅಲ್ಲವೆ ಮೀಸಲು ಅದುವೇ
ರಕ್ಷಿಸು ಲೋಕವ ಪಡೆಯುತ ಅದನು ॥ ೧೯೮ ॥

ಕೇಳುತ ಮೊರೆಯನು ಶಂಕರ ಆಗಲೆ
ಕುಡಿದನು ವಿಷವನು ಅಮೃತದಂತೆಯೆ
ನಡೆಯಿತು ಕಡೆತವು ಮುಂದಕೆ ಹಾಗೆಯೆ
ನೋಡುತ ನೋಡುತ ಕುಸಿಯಿತು ಪರ್ವತ ||೧೯೯||

ಎಲ್ಲರು ಇಟ್ಟರು ಮೊರೆಯನು ಹರಿಗೆ
ಎತ್ತಲು ಮೇಲಕೆ ಬೆಟ್ಟವ ಕಡೆಯಲು
ಒಪ್ಪುತ ವಿಷ್ಣುವು ಆದನು ಕೂರ್ಮನು
ಹೊತ್ತನು ಪರ್ವತ ಬೆನ್ನಿನ ಮೇಲೆಯೆ ||೨೦೦||

ನಡೆಯಿತು ಮಥನವು ಸಾಸಿರ ವರುಷವು
ಹುಟ್ಟಿದ ಆಗಲೆ ಧನ್ವಂತರಿಯು
ಆದನು ಅಧಿಪತಿ ಆಯುರ್ವೇದಕೆ
ನಂತರ ಬಂದರು ಅಪ್ಸರೆಯರೆಲ್ಲ ||೨೦೧||

ವರುಣನ ಕನ್ಯೆಯು ವಾರುಣಿ ಬಂದಳು
ಇದ್ದಳು ಸುರಾಧಿದೇವತೆ ಅವಳು
ವರಿಸಲು ಬಂದರು ದಿತಿಜರು ದೈತ್ಯರು
ಅದಿತಿಯ ಪುತ್ರರು ವರಿಸಿದರವಳನು ||೨೦೨||

ಬಂದಳು ಲಕ್ಷ್ಮಿಯು ಸುಂದರ ವದನೆಯು
ನಂತರ ಬಂದಿತು ಕುದುರೆಯು ಶುಭ್ರವು
ಹೆಸರದು ಇದ್ದಿತು ಉಚ್ಚೈಶ್ರವವು
ಕೌಸ್ತುಭ ಹಾರವು ಬಂದಿತು ಆಗಲೆ ||೨೦೩||

ಬಂದಿತು ಇಚ್ಚಿತ ಅಮೃತ ಕೊನೆಯಲಿ
ನಡೆಯಿತು ಯುದ್ಧವು ಪಡೆಯಲು ಅದನು
ಸತ್ತರು ದೈತ್ಯರು ಅದರಲಿ ಬಹು ಜನ
ನಡುಗಿತು ಲೋಕವು ಯುದ್ಧದ ರಭಸಕೆ || ೨೦೪ ||

ವಿಷ್ಣುವು ಧರಿಸಿದ ಮೋಹಿನಿ ರೂಪವ
ಕಸಿದನು ಅಮೃತ ಒಯ್ದನು ದೂರಕೆ
ಬಂದಿಹ ದೈತ್ಯರ ಕೊಲ್ಲುತ ಅವನೂ
ಇಂದ್ರನು ಕೊಂದನು ಬಹು ಜನ ದೈತ್ಯರ || ೨೦೫ ||

ಸತ್ತಿಹ ಮಕ್ಕಳ ನೋಡುತ ದಿತಿಯು
ಆದಳು ಖಿನ್ನಳು ಸೇಡದು ಮೂಡಿತು
ಇಂದ್ರನ ಕೊಲ್ಲುವ ಮಗನನು ಪಡೆಯಲು
ಕಶ್ಯಪ ಗಂಡಗೆ ಪ್ರಾರ್ಥನೆಗೈದಳು || ೨೦೬ ||

ನೋಡುತ ದುಃಖವ ಕರಗಿತು ಮನಸು
ಹೇಳಿದ ಅವಳಿಗೆ ತಪವನು ಮಾಡಲು
ಸಾಸಿರ ವರುಷವ ತಪವನು ಗೈದರೆ
ಪಡೆಯುವೆ ಅಂತಹ ಶಕ್ತಿಯ ಕುವರನ || ೨೦೭ ||

ಕೇಳುತ ಹರ್ಷದಿ ಬಂದಳು ದಿತಿಯು
ಇಲ್ಲಿಗೆ ಅಂದರೆ ಕುಶಪ್ಲವವನಕೆ
ಆಗಿದೆ ಈಗಲಿ ವಿಶಾಲ ನಗರವು
ಇಲ್ಲಿಯೆ ಮಾಡುತ ತಪವನು ಆಕೆಯು || ೨೦೮ ||

ಗರ್ಭವು ಬೆಳೆಯಿತು ಇಂದ್ರನು ಬಂದನು
ಮಾಯಾರೂಪದಿ ಗರ್ಭವ ಸೇರಿದ
ಮಾಡಿದ ಪಿಂಡವ ತುಂಡುಗಳೇಳನು
ಅವರೇ ಆದರು ಮರುತರು ನಂತರ ॥ ೨೦೯ ॥

ಇಲ್ಲಿಹ ನಗರದಿ ಆಳುವ ರಾಜನು
ಸುಮತಿಯು ಇರುವನು ಧಾರ್ಮಿಕ ಪುರುಷನು
ಕಳೆಯುತ ರಾತ್ರಿಯ ಇಲ್ಲಿಯೆ ಇಂದಿಗೆ
ನಾಳೆಗೆ ಹೋಗುವ ಜನಕನ ಕಡೆಗೆ ॥ ೨೧೦ ॥

## ೨೦. ಅಹಲ್ಯೆಯ ಕತೆ

ಮರುದಿನ ಹೊರಟರು ಮಿಥಿಲಾ ನಗರಕೆ
ನಗರದ ಹತ್ತಿರ ಕಂಡಿತು ವನವದು
ಇದ್ದಿತು ಸುಂದರ ಯಾರೂ ಇಲ್ಲವು
ಕೇಳಿದ ರಾಮನು ಏನಿದು ಕಾರಣ ॥ ೨೧೧ ॥

ಕೌಶಿಕ ಹೇಳಿದ ಗೌತಮನಾಶ್ರಮ
ಹಿಂದಕೆ ತಪವನು ಮಾಡಿದ ಇಲ್ಲಿಯೆ
ಇದ್ದನು ಅಹಲ್ಯೆ ಸತಿಯಳ ಸಹಿತ
ಒಂದಿನ ಬಂದನು ಇಂದ್ರನು ಕಾಮಿಸಿ ॥ ೨೧೨ ॥

ಗೌತಮರೂಪವ ತಳೆಯುತ ಇಂದ್ರನು
ಹೊಕ್ಕನು ಗೌತಮ ಇಲ್ಲದ ಸಮಯದಿ
ಅಹಲ್ಯೆ ತಿಳಿದಳು ಇಂದ್ರನು ಎಂದು
ಆದರು ಸೋತಳು ಅವನಿಗೆ ಅಂದು ॥ ೨೧೩ ॥

ಇಂದ್ರನು ಬಂದನು ಆಶ್ರಮ ಹೊರಗೆ
ಕಂಡನು ಗೌತಮ ಬರುವದು ಅಲ್ಲಿಗೆ
ಕೊಟ್ಟನು ಶಾಪವ ಇಂದ್ರಗೆ ಕೂಡಲೆ
ವೃಷಣವು ಅವನವು ಆಗಲೆ ಹೋಗಲು ॥ ೨೧೪ ॥

ಕೊಟ್ಟನು ಶಾಪವ ಹೆಂಡತಿಗಾಗಲೆ
ಬಿದ್ದಿರು ಇಲ್ಲಿಯೆ ಬೂದಿಯಲುರುಳುತ
ಸಾಸಿರ ವರುಷವ ಯಾರಿಗು ಕಾಣದೆ
ತಪವನು ಮಾಡುತ ಪ್ರಾಯಶ್ಚಿತ್ತಕೆ ॥ ೨೧೫ ॥

ದಶರಥ ಕುವರನು ರಾಮನು ಬಂದರೆ
ಲೋಭವು ಮೋಹವು ಇಲ್ಲದೆ ಪೂಜಿಸು
ಆಗಲೆ ಮುಕ್ತಿಯು ಶಾಪದಿ ನಿನಗೆ
ಪಡೆಯುವೆ ನಿನ್ನಯ ದೇಹವ ಆಗಲೆ ॥ ೨೧೬ ॥

ಎನ್ನುತ ಅಲ್ಲಿಗೆ ನಡೆದರು ಎಲ್ಲರು
ರಾಮನು ಹೊರಟನು ಮುಂದಕೆ ಎಲ್ಲರ
ಸಾಸಿರ ವರುಷದ ತಪಸಿನ ಫಲದಿಂ
ಕಂಡಳು ಅಹಲ್ಯೆ ಜ್ಯೋತಿಯ ತೆರದಿ ॥ ೨೧೭ ॥

ರಾಮನ ನೋಡುತ ಪಡೆದಳು ದೇಹವ
ರಾಮಲಕ್ಷ್ಮಣರ ಮುಟ್ಟುತ ಪಾದವ
ನಮಿಸಿದಳಾಗಲೆ ಭಕ್ತಿಯು ತುಂಬಿ
ಪೂಜಿಸಿದಳವಳು ಹೃದಯವ ತುಂಬಿ ॥ ೨೧೮ ॥

## ೨೧. ಮಿಥಿಲಾನಗರಕ್ಕೆ ಬಂದುದು

ಬಂದರು ಹಾಗೆಯೆ ಮಿಥಿಲೆಗೆ ಅವರು
ನೋಡುತ ಸುಂದರ ನಗರವ ಎಲ್ಲರು
ಋಷಿಗಳು ದ್ವಿಜರೂ ಜನತೆಯು ಎಲ್ಲರು
ತುಂಬಿದೆ ಸಂತಸ ಎಲ್ಲರ ಮುಖದಲಿ || ೨೧೯ ||

ಕೌಶಿಕ ಉಳಿದನು ಶಿಷ್ಯರ ಸಮೇತ
ಒಂದೆಡೆ ಗಿಡಗಳ ಗುಂಪಿನ ತಾಣದಿ
ಮುಟ್ಟಿತು ಸುದ್ದಿಯು ಜನಕನೃಪತಿಗೆ
ಬಂದನು ಎಲ್ಲರ ಸ್ವಾಗತ ಕೋರಲು || ೨೨೦ ||

ಹೋದರು ಎಲ್ಲರು ರಾಜನ ಜೊತೆಗೆ
ಕೇಳಿದ ಕೌಶಿಕ ಯಜ್ಞದ ವಿಷಯವ
ರಾಜನು ಹೇಳುತ ತಿಳಿಸಿದ ಎಲ್ಲವ
ದೀಕ್ಷೆಯ ಹೊಂದುವೆ ನಾಳಿನ ದಿನದಿಂ || ೨೨೧ ||

ದೀಕ್ಷೆಯ ದಿನಗಳು ದ್ವಾದಶ ಆಗಿರೆ
ನಂತರ ಕೊಡುವೆವು ಹವಿಸನು ನಾವು
ಕಾಣಿರಿ ಎಲ್ಲರು ದೇವತೆ ಎಲ್ಲರ
ಪಡೆಯುತ ಹವಿಸನು ತೃಪ್ತಿಯ ಸೂಸುತ || ೨೨೨ ||

ಬಂದಿಹ ಕುವರರು ಯಾರದು ತಿಳಿಯದು
ನೋಡಲು ಇರುವರು ತೇಜಃಪುಂಜರು
ಸಿಂಹದ ಗೌರವ ಇರುತಿಹ ನರರು
ಕಣ್ಣುಗಳೇನೋ ಕಮಲದ ಅರಳು || ೨೨೩ ||

ಬಿಲ್ಲನು ನೋಡಲು ಕ್ಷತ್ರಿಯ ಕುವರರು
ಇಬ್ಬರು ನೋಡಲು ಒಂದೆಯೆ ರೀತಿಯು
ಕೌಶಿಕ ಹೇಳಿದ ದಶರಥಕುವರರು
ಹೇಳಿದ ವಿಷಯವ ಅಲ್ಲಿಯ ವರೆಗೆ || ೨೨೪ ||

ಬಂದಿಹರೀರ್ವರು ಕಾಣಲು ನಿನ್ನನು
ಶಂಕರ ಕೊಟ್ಟಿಹ ಧನುವನು ನೋಡಲು
ಕೇಳುತ ಜನಕನು ಹರ್ಷಿತನಾದನು
ಕೊಟ್ಟನು ಅವರಿಗೆ ಇಳಿಯಲು ಅರಮನೆ || ೨೨೫ ||

ಅಲ್ಲಿಗೆ ಬಂದರು ಪುರೋಹಿತರಾಗ
ಗೌತಮಪುತ್ರರು ಶತಾನಂದರು
ರಾಮಗೆ ಅಂದರು ಧನ್ಯರು ನೀವು
ರಕ್ಷೆಯು ಇರುವದು ಕೌಶಿಕ ಮುನಿಯದು || ೨೨೬ ||

## ೨೨. ವಿಶ್ವಾಮಿತ್ರನ ಚರಿತ್ರೆ

ತಿಳಿಯಿರಿ ಅವನದು ಮಹಿಮೆಯ ನೀವು
ಅಂತಹ ವೀರನು ಶೂರನು ಇಲ್ಲವು
ತಪದಲಿ ಕೂಡಾ ಛಲದಲಿ ಕೂಡಾ
ಇಲ್ಲವೆ ಇಲ್ಲಾ ಅವನಿಗೆ ಸರಿಸಮ || ೨೨೭ ||

ರಾಮನು ಕೇಳಿದ ಗುರುಗಳೆ ಹೇಳಿರಿ
ಕೌಶಿಕ ಗುರುಗಳ ಕಥೆಯನು ತಿಳಿಸಿರಿ
ತಿಳಿಯದು ನಮಗದು ಏನೂ ಒಂದೂ
ಹೇಳಿದರಾಗಲೆ ಕೌಶಿಕ ಕಥೆಯನು || ೨೨೮ ||

ಹಿಂದಕೆ ಇದ್ದನು ಗಾಧಿಯು ರಾಜನು
ಅವನಿಗೆ ಮಗನೇ ಕೌಶಿಕ ಮುನಿಯು
ಕರೆದರು ಇವನನು ವಿಶ್ವಾಮಿತ್ರನು
ಇದ್ದನು ವೀರನು ಶೂರನು ಧೀರನು || ೧೨೯ ||

ಆಳಿದ ಭೂಮಿಯ ದರ್ಪದ ಕೈಯಲಿ
ಕಳೆದನು ಎಷ್ಟೋ ಸಾವಿರ ವರ್ಷವ
ಹೊರಟನು ಒಂದಿನ ದಿಗ್ವಿಜಯಕಾಗಿ
ತಿರುಗಿದ ದೇಶಗಳನೇಕವ ಆಗ || ೧೩೦ ||

ತಿರುಗುತ ತಿರುಗುತ ಮುಟ್ಟಿದ ಆಶ್ರಮ
ತಿಳಿಯಿತು ಅವನಿಗೆ ವಸಿಷ್ಠರದೆಂದು
ಸುಂದರ ವನವದು ಶಾಂತಿಯ ತಾಣವು
ಮೃಗಗಳು ಇದ್ದವು ವೈರವ ಮರೆತು || ೧೩೧ ||

ತಾಳುತ ಗೌರವ ಋಷಿಗಳ ಕಂಡನು
ನಮಿಸುತ ಅವರಿಗೆ ಕೇಳಿದ ಕುಶಲವ
ವಸಿಷ್ಠ ಕೇಳಿದ ರಾಜನ ಕ್ಷೇಮವ
ಹಾಗೆಯೆ ಅಂದನು ಕೌಶಿಕ ರಾಜಗೆ || ೧೩೨ ||

ರಾಜನೆ ಈ ದಿನ ನಮ್ಮಯ ಅತಿಥಿಯು
ಭೋಜನವಾಗಲಿ ಆಶ್ರಮದಲ್ಲಿಯೆ
ನಿನ್ನಯ ಸಂಗಡ ಎಲ್ಲರು ಉಣ್ಣಲಿ
ಭಾಗ್ಯವು ಬಂದಿದೆ ಉಣಿಸುವೆ ರಾಜಗೆ || ೧೩೩ ||

ಕೌಶಿಕನೆಂದನು ಹೇಗದು ಸಾಧ್ಯವು
ಎನ್ನಯ ಸೈನ್ಯವು ಅಕ್ಷೋಹಿಣಿ ಮೀರಿ
ಅಂದರು ವಸಿಷ್ಠ ಮುನಿಗಳು ಅದಕೆ
ಚಿಂತೆಯು ಬೇಡಾ ರಾಜನೆ ಆದರದು ॥ ೨೩೪ ॥

ಕರೆದರು ಶಬಲೆಯ ಕಾಮಧೇನುವನು
ಹೇಳಿದರವಳಿಗೆ ಊಟದ ಬಗೆಯನು
ರಾಜಗೆ ಸೈನ್ಯಕೆ ಊಟವ ಹಾಕಲು
ಕೊಡು ನೀ ಸಕಲರ ರಾಜಭೋಜನವ ॥ ೨೩೫ ॥

ಕೊಟ್ಟಳು ಶಬಲೆಯು ಸಂತಸದಿಂದಲಿ
ಬಂದಿತು ಕಬ್ಬಿನ ಹಾಲೂ ಜೇನೂ
ಅಲ್ಲದೆ ಪಾನಕ ಮದ್ಯವು ಕೂಡಾ
ಹಾಲೂ ಮೊಸರೂ ತುಂಬಿದ ಕೊಡಗಳು ॥ ೨೩೬ ॥

ಅನ್ನದ ರಾಶಿಯು ಸಕ್ಕರೆ ಹೋಳಿಗೆ
ಅಲ್ಲಿಯೆ ಕಂಡಿತು ತುಪ್ಪದ ಕೆರೆಯು
ಸಿದ್ಧವು ಆದವು ಪಕ್ವಾನ್ನಗಳೆಲ್ಲ
ಸಕ್ಕರೆ ಅನ್ನವು ಖಾರದ ಅನ್ನವು ॥ ೨೩೭ ॥

ರುಚಿಸಲು ಇದ್ದವು ವ್ಯಂಜನ ರಸಗಳು
ತುಪ್ಪದಿ ಮಾಡಿದ ಪಲ್ಯಗಳೆಷ್ಟೋ
ಎಂದೂ ಉಣ್ಣದ ಭೋಜ್ಯಗಳೆಷ್ಟೋ
ಉಂಡರು ತಿಂದರು ತೇಗುತ ಎಲ್ಲರು ॥ ೨೩೮ ॥

ಊಟದ ಸಮಯದಿ ಹರಡಿತು ಪರಿಮಳ
ಜೊತೆಗೇ ಇದ್ದಿತು ಗಂಧರ್ವ ಗಾನ
ಬಂದಿತು ಕೊನೆಗೆ ತಾಂಬೂಲ ಕೂಡ
ನೋಡುತ ಕೌಶಿಕ ಪಟ್ಟನು ಕೌತುಕ ‖ ೨೩೯ ‖

ಯೋಚಿಸಿ ಮನದಲಿ ಕೇಳಿದ ಕೌಶಿಕ
ವಸಿಷ್ಠಮುನಿಗಳೆ ಧನ್ಯನು ನಾನು
ತೃಪ್ತನು ಆದೆನು ಬೇಡುವೆ ನಿಮಗೆ
ಅದ್ಭುತ ಶಕ್ತಿಯು ಶಬಲೆಯು ನಿಜಕೂ ‖ ೨೪೦ ‖

ಕೊಡುವೆನು ಈಗಲೆ ಲಕ್ಷ ಗೋವುಗಳ
ಕೊಡುವದು ಶಬಲೆಯ ಕೂಡಲೆ ನನಗೆ
ಇರುವದು ಇಲ್ಲಿಯೆ ಕೆಲವರು ಮಾತ್ರವೆ
ಶಬಲೆಯು ನಿಶ್ಚಿತ ರಾಜಗೆ ಬೇಕು ‖ ೨೪೧ ‖

ರಾಜನು ಇರುವನು ಪೃಥಿವೀಪತಿಯು
ಇರುವದು ಎಲ್ಲವು ಅವನಿಗೆ ಅಧೀನ
ಶಬಲೆಯು ಕೂಡಾ ಅವನದೆ ಆಸ್ತಿಯು
ಕೊಡುವದು ಶಬಲೆಯ ಈಗಲೆ ನೀವು ‖ ೨೪೨ ‖

ನಗುತಲಿ ವಸಿಷ್ಠ ನುಡಿದರು ಹೀಗೆ
ಕೊಟ್ಟರು ಕೂಡಾ ಶತಕೋಟಿ ಗೋಗಳ
ಆಗವು ಅವುಗಳು ಶಬಲೆಯ ಸರಿಸಮ
ಶಬಲೆಯು ಎಂದೂ ವಿಸಿಮಯಕಿಲ್ಲವು ‖ ೨೪೩ ‖

ಯೋಚಿಸಿ ರಾಜನು ಹೇಳಿದ ಭಟರಿಗೆ
ಒಯ್ಯಲು ಶಬಲೆಯ ಎಳೆಯುತ ಅವಳನು
ಒದೆಯುತ ಇರಿಯುತ ಎಲ್ಲಾ ಭಟರನು
ಬಂದಳು ಓಡುತ ಋಷಿಗಳ ಕಡೆಗೆ ॥ ೨೪೪ ॥

ಬೇಡುತ ಋಷಿಯನು ಅಂದಳು ಅವಳು
ಏನಿದು ಗುರುವೇ ತೊರೆದೆಯೆ ಎನ್ನನು
ಏಕಿದು ಮೌನವು ಎಳೆದರೂ ಭಟರು
ಅಂದರು ಗುರುಗಳು ಮೆಲ್ಲಗೆ ಅವಳಿಗೆ ॥ ೨೪೫ ॥

ತಿಳಿಯದೆ ಮಗುವೇ ರಾಜನು ಅವನು
ಬಲವಿದೆ ಅವನಿಗೆ ಚತುರಂಗ ಸೈನ್ಯ
ಶಕ್ತಿಯ ಸೊಕ್ಕಿಲೆ ಎಳೆದಿಹ ನಿನ್ನನು
ಅನ್ನಲು ಶಬಲೆಯು ಅಂದಳು ಈ ಪರಿ ॥ ೨೪೬ ॥

ಗುರುಗಳೆ ರಾಜನು ಕ್ಷತ್ರಿಯನಿರುವನು
ನಿಮ್ಮಯ ಶಕ್ತಿಯು ಬ್ರಹ್ಮತೇಜವು
ಅವನದು ಆಗದು ನಿಮಗದು ಸರಿಸವು
ಆಜ್ಞೆಯ ನೀಡಿರಿ ತೋರುವೆ ಶಕ್ತಿಯ ॥ ೨೪೭ ॥

ಕೂಡಲೆ ಋಷಿಗಳು ಅಂದರು ಶಬಲೆಗೆ
ಸೃಷ್ಟಿಸು ಸೈನ್ಯವ ರಾಜನ ಮೆಟ್ಟಲು
ಶಬಲೆಯು ಹುಟ್ಟಿಸಿ ಪಪ್ಲವ ಶತರನು
ಕೊಂದಳು ಕೌಶಿಕ ಸೈನ್ಯವ ಅಲ್ಲಿಯೆ ॥ ೨೪೮ ॥

ಕೌಶಿಕನಾದನು ಬೆಂಕಿಯ ಕಿಡಿಯು
ಅಸ್ತ್ರವ ಬಿಡುತಲಿ ಕೊಂದನು ಅವರನು
ಶಬಲೆಯು ಹುಟ್ಟಿಸಿ ಶಕರನು ಯವನರ
ನುಗ್ಗಿದರೆಲ್ಲರು ಸೈನ್ಯದ ಮೇಲೆ || ೩೪೯ ||

ಅಲ್ಲದೆ ಬಂದರು ಕಾಂಭೋಜರು ಸಹ
ಬರ್ಬರ ಯವನರು ಶಶಕ ಕಿರಾತರು
ಕೊಂದರು ಎಲ್ಲರು ರಾಜನ ಸೈನ್ಯವ
ನೋಡುತಲೆಲ್ಲವ ಕೌಶಿಕಪುತ್ರರು || ೩೫೦ ||

ಬಂದರು ಎಲ್ಲರು ನೂರೂ ಮಕ್ಕಳು
ಕೊಲ್ಲಲು ವಸಿಷ್ಠ ಋಷಿಯನು ಆಗಲೆ
ಋಷಿಗಳು ಮಾಡಿದ ಹೂಂಕಾರದಿಂದ
ಆದರು ಎಲ್ಲರು ಬೂದಿಯು ಅಲ್ಲಿಯೆ || ೩೫೧ ||

ನೋಡುತ ಎದುರಿಗೆ ಸೈನ್ಯದ ನಾಶವ
ಮಕ್ಕಳ ಮರಣವ ಆಯಿತು ನಾಚಿಕೆ
ಹೊಟ್ಟೆಯು ಸಿಟ್ಟಿದು ರಟ್ಟಿಗೆ ಬಾರದು
ಸೇಡಿನ ಕಿಡಿಯದು ಆರದು ಎಂದೂ || ೩೫೨ ||

ಉಳಿದಿಹ ಒಬ್ಬನೆ ಮಗನಿಗೆ ಹೇಳಿದ
ರಾಜ್ಯವ ಪಾಲಿಸು ಹೋಗುವೆ ವನಕೆ
ಸೇರಿದ ಹಿಮವತ್ಪರ್ವತ ತುದಿಗೆ
ತಪವನು ಮಾಡಿದ ಶಿವನನು ಕುರಿತು || ೩೫೩ ||

ಆಯಿತು ತಪವದು ಘೋರವು ದಿನದಿನ
ಒಂದಿನ ಶಂಕರ ಮೆಚ್ಚಿದ ಇವನನು
ತೋರುತ ರೂಪವ ಕೇಳಲು ವರವನು
ಹೇಳಿದ ರಾಜಗೆ ಸಂತಸದಿಂದಲಿ ॥ ೨೫೪ ॥

ರಾಜನು ಕೇಳಿದ ವಂದಿಸಿ ದೇವನ
ತುಷ್ಟನು ಆದರೆ ಕೊಡು ನೀ ವರವನು
ಧನುರ್ವೇದವಂ ಮಂತ್ರದ ಸಹಿತ
ಅಂಗೋಪಾಂಗವ ರಹಸ್ಯವ ಕೂಡ ॥ ೨೫೫ ॥

ದೇವದಾನವ ಋಷಿಮುನಿಗಳ ಜೊತೆ
ಯಕ್ಷರಾಕ್ಷಸರ ಗಂಧರ್ವರ ಬಳಿ
ಇರುತಿಹ ಮಂತ್ರವ ಅಸ್ತ್ರವ ಕರುಣಿಸು
ಆಗಲಿ ಎನ್ನುತ ಕೊಟ್ಟನು ವರವನು ॥ ೨೫೬ ॥

ಪಡೆಯುತ ಅಸ್ತ್ರವ ಹೆಚ್ಚಿತು ಶಕ್ತಿಯು
ಸೇಡಿನ ಕಿಡಿಯದು ಆಯಿತು ಬೆಂಕಿಯು
ಓಡುತ ತಲುಪಿದ ವಸಿಷ್ಠರಾಶ್ರಮ
ಭೀಕರ ಅಸ್ತ್ರದಿ ಸುಟ್ಟನು ಅದನು ॥ ೨೫೭ ॥

ಓಡಿದರೆಲ್ಲೆಡೆ ಆಶ್ರಮದವರು
ನೋಡುತ ಎಲ್ಲವ ವಸಿಷ್ಠ ಮುನಿಗಳು
ಬಂದರು ಹೊರಗಡೆ ಕೆರಳಿದ ಕೋಪದಿ
ಇದ್ದಿತು ಕೈಯಲಿ ಬ್ರಹ್ಮದಂಡವದು ॥ ೨೫೮ ॥

ಕ್ಷತ್ರಿಯ ನೀಚನೆ ತೋರಿಸು ದರ್ಪವ
ತೋರುವೆ ಮೂರ್ಖನೆ ಬ್ರಹ್ಮತೇಜವನು
ಎನ್ನುತ ಹಿಡಿದರು ಕೈಯಲಿ ಎತ್ತುತ
ಬ್ರಹ್ಮದಂಡ ಮಾಡುತ ಯಮದಂಡವ ॥ ೨೪೯ ॥

ಕೌಶಿಕ ಬಿಟ್ಟನು ಅಗ್ನಿಯ ವಾರುಣ
ಗಾಂಧರ್ವ ಐಂದ್ರ ಪಾಶುಪತ ಮಾನವ
ಐಷಿಕ ತೇಜದ ಮೋಹನ ರೌದ್ರ
ಸ್ನಾಪನ ಜೃಂಭಣ ಅಸ್ತ್ರಗಳೆಷ್ಟೋ ॥ ೨೫೦ ॥

ಕೊನೆಯಲಿ ಬಿಟ್ಟನು ಬ್ರಹ್ಮಾಸ್ತ್ರ ಮಾತ್ರ
ನೋಡುತ ಈ ಪರಿ ನಡುಗಿತು ಲೋಕವು
ವಸಿಷ್ಠ ದೇಹದಿ ಹೊರಟಿತು ಹೊಗೆಯು
ಕಂಡಿತು ಬೆಂಕಿಯು ರೋಮರೋಮದಲಿ ॥ ೨೫೧ ॥

ಅಡಗಿತು ಅಸ್ತ್ರವು ಬ್ರಹ್ಮತೇಜದಲಿ
ನುಂಗಿತು ದಂಡವು ಅಸ್ತ್ರಗಳೆಲ್ಲವ
ದೇವತೆ ಗಣಗಳು ಅಂದರು ಆಗಲೆ
ಆಗಿರಿ ಶಾಂತವು ಉಳಿಸಿರಿ ಲೋಕವ ॥ ೨೫೨ ॥

ವಸಿಷ್ಠ ಋಷಿಗಳು ಆದರು ಶಾಂತರು
ಕೌಶಿಕ ಸೋಲುತ ಎಸೆದನು ಬಿಲ್ಲನು
ಕ್ಷತ್ರಿಯ ಶಕ್ತಿಗೆ ಧಿಕ್ಕಾರವಿರಲಿ
ಬ್ರಹ್ಮದ ತೇಜದ ಬಲವೇ ಬಲವು ॥ ೨೫೩ ॥

ಪಡೆದಿಹ ಅಸ್ತ್ರಗಳೆಲ್ಲವು ಹೋದವು
ನೋಡುತ ನೋಡುತ ದಂಡದ ಎದುರಿಗೆ
ಮಾಡುವೆ ನಾನೂ ತಪವನು ಉಗ್ರದಿ
ಪಡೆಯುವೆ ನಿಶ್ಚಯ ಬ್ರಹ್ಮತೇಜವನು ॥ ೨೬೪ ॥

ಸೇಡಿನ ಕಿಡಿಯದು ಆರಲೆ ಇಲ್ಲವು
ಸೋತಿಹ ಸಿಟ್ಟನು ಮರೆಯಲೆ ಇಲ್ಲವು
ಮಾಡಿದ ತಪವನು ಸಾವಿರ ವರುಷವ
ಬ್ರಹ್ಮನು ಕರೆದನು ರಾಜರ್ಷಿಯೆಂದು ॥ ೨೬೫ ॥

ಕೌಶಿಕ ಅಂದನು ಮನದಲಿ ಚಿಂತಿಸಿ
ಮಾಡಿದೆ ಎಷ್ಟೋ ತಪವನು ನಾನು
ಆದೆನೆ ಕೇವಲ ರಾಜರ್ಷಿಯೆಂದು
ಬಿಡದಲೆ ಮಾಡಿದ ತಪವನು ಹಾಗೆಯೆ ॥ ೨೬೬ ॥

## ೨೩. ತ್ರಿಶಂಕುರಾಜನ ಕತೆ

ಆಗಿನ ಸಮಯದಿ ಇದ್ದನು ಒಬ್ಬನು
ಇಕ್ಷ್ವಾಕು ರಾಜ ನಿಮ್ಮಯ ಪೂರ್ವಜ
ಕರೆದರು ಅವನನು ತ್ರಿಶಂಕುವೆಂದು
ಇದ್ದಿತು ಇಚ್ಛೆಯು ವಿಚಿತ್ರವೊಂದು ॥ ೨೬೭ ॥

ಸ್ವರ್ಗಕೆ ಹೋಗಲು ದೇಹದ ಸಮೇತ
ಇಚ್ಛೆಯು ಇದ್ದಿತು ಮನದಲಿ ಅವನಿಗೆ
ಗುರುಗಳ ಕೇಳಿದ ದಾರಿಯ ತೋರಲು
ವಸಿಷ್ಠರೆಂದರು ಆಗದು ರಾಜನೆ ॥ ೨೬೮ ॥

ನಡೆದನು ರಾಜನು ದಕ್ಷಿಣ ದಿಕ್ಕಿಗೆ
ಇದ್ದರು ಅಲ್ಲಿಯೆ ವಸಿಷ್ಠ ಪುತ್ರರು
ತಪವನು ಮಾಡುತ ಇದ್ದರು ಎಲ್ಲರು
ನಮಿಸಿದ ರಾಜನು ಪುತ್ರರು ಶತರಿಗೆ || ೨೭೯ ||

ಕೇಳಿದನವರಿಗೆ ಯಾಗವ ಮಾಡಲು
ಕಳಿಸಲು ಅವನನು ದೇಹದಿ ಸ್ವರ್ಗಕೆ
ತಿಳಿಸಿದನವರಿಗೆ ಆದುದು ಎಲ್ಲವ
ವಸಿಷ್ಠ ಋಷಿಗಳು ಆಗದು ಎಂದುದು || ೨೮೦ ||

ಕೇಳುತ ಎಲ್ಲವ ಬಂದಿತು ಕೋಪವು
ಅಂದರು ಆಗಲೆ ಮೂರ್ಖನೆ ರಾಜನೆ
ಪಿತವರ ಮಾಡದ ಯಾಗವ ಮಾಡಲು
ಸಾಧ್ಯವೆ ಉಚಿತವೆ ಹೇಳೆಲೊ ನೀನು || ೨೮೧ ||

ಬುದ್ಧಿಯು ಇದ್ದರೆ ಊರಿಗೆ ಹೋಗೆಲೊ
ಕೇಳುತ ಮಾತನು ರಾಜನು ಅಂದನು
ಗುರುಗಳು ಬಿಟ್ಟರು ನೀವೂ ಬಿಟ್ಟರಿ
ಹಿಡಿಯುವೆ ಬೇರೆಯ ಋಷಿಗಳ ಇದಕೆ || ೨೮೨ ||

ಕೇಳುತ ಮಾತನು ಸಿಟ್ಟದು ಬಂದಿತು
ಕೊಟ್ಟರು ಶಾಪವ 'ಚಾಂಡಾಲನಾಗು'
ಬಂದನು ರಾಜನು ತನ್ನಯ ತಾಣಕೆ
ಕಳೆದನು ರಾತ್ರಿಯ ಬೆಳಗುತ ನೋಡಿದ || ೨೮೩ ||

ಶಾಪವು ಫಲಿಸಿತು ಬೆಳಗಿನ ಮೊದಲೆ
ಉಟ್ಟಿಹ ಬಟ್ಟೆಯು ಆಯಿತು ಕರ್ರಗೆ
ಬಣ್ಣವು ಹಾಗೆಯೆ ಕೂದಲು ಹರಕು
ಚಿನ್ನದ ವಡವೆಯು ಆಯಿತು ಕಬ್ಬಿಣ || ೨೭೪ ||

ರಾಜನ ರೂಪವ ನೋಡುತ ಸಚಿವರು
ಬಂದಿಹ ಸೈನಿಕ ಪೌರರು ಎಲ್ಲರು
ಓಡಿದರೆಲ್ಲರು ನಿಲ್ಲದೆ ಒಬ್ಬರು
ರಾಜನು ಉಳಿದನು ಒಬ್ಬನೆ ದುಃಖದಿ || ೨೭೫ ||

ಆದರು ಮನದಲಿ ಇದ್ದಿತು ನಿಶ್ಚಯ
ಬಂದನು ನೆಟ್ಟಗೆ ಕೌಶಿಕ ಋಷಿಯೆಡೆ
ಹೇಳಿದ ಅವರಿಗೆ ಕತೆಯನು ಎಲ್ಲವ
ಇರುವೆನು ಮುನಿಯೇ ಇಕ್ಷ್ವಾಕು ರಾಜನು || ೨೭೬ ||

ಮಾಡಿಹೆ ನಾನೂ ಶತಯಾಗಗಳನು
ಸುಳ್ಳನು ಎಂದೂ ಹೇಳಿಯೆ ಇಲ್ಲಾ
ಧರ್ಮದಿ ರಾಜ್ಯವ ಆಳಿದೆ ನಾನು
ಗುರುಗಳ ಹಿರಿಯರ ಕಂಡರೆ ಭಕ್ತಿಯು || ೨೭೭ ||

ಆದರು ನೋಡಿರಿ ಬಂದಿದೆ ಈಗಲೆ
ಯತ್ನದಕಿಂತಲು ದೈವವೆ ಪ್ರಬಲವು
ಬಂದಿಹೆ ನಿಮ್ಮೆಡೆ ಆಶ್ರಯ ಕೋರುತ
ನಿಮ್ಮನು ಬಿಟ್ಟರೆ ಆಶೆಯು ಫಲಿಸದು || ೨೭೮ ||

ಕೌಶಿಕ ಎಂದನು ಸ್ವಾಗತ ರಾಜನೆ
ತಿಳಿದಿಹೆ ನಿನ್ನನು ಧಾರ್ಮಿಕನೆಂದೂ
ಕಳಿಸುವೆ ನಿಶ್ಚಯ ಸ್ವರ್ಗಕೆ ನಿನ್ನನು
ದೇಹದ ಸಹಿತವೆ ಇದುವೇ ರೂಪದಿ || ೨೭೯ ||

ಎನ್ನಯ ರಕ್ಷೆಯು ಇರುವದು ನಿನಗೆ
ಕೌಶಿಕ ಹೇಳಲು ತಪ್ಪದು ಎಂದೂ
ಸಂಶಯ ಬೇಡಾ ನಿಶ್ಚಿತ ತಿಳಿಸೀ
ಕರೆದರು ಶಿಷ್ಯರ ಅಂದರು ಅವರಿಗೆ || ೨೮೦ ||

ಹೋಗಿರಿ ಈಗಲೆ ಕರೆಯಿರಿ ಋಷಿಗಳ
ಯಾಗವ ಮಾಡುವೆ ತಿಳಿಸಿರಿ ಅವರಿಗೆ
ಬಾರದೆ ಇದ್ದರೆ ತಿಳಿಸಿರಿ ನನಗೆ
ಹೋದರು ಶಿಷ್ಯರು ಕರೆಯಲು ಋಷಿಗಳ || ೨೮೧ ||

ಯಜ್ಞದ ಸಿದ್ಧತೆ ನಡೆಯಿತು ಭರದಿಂ
ಬಂದರು ಶಿಷ್ಯರು ದೇಶವ ತಿರುಗಿ
ಬರುವರು ಬ್ರಾಹ್ಮಣ ಶ್ರೇಷ್ಠರು ಎಲ್ಲರು
ಆದರೆ ವಸಿಷ್ಠಪುತ್ರರು ಅಂದರು || ೨೮೨ ||

ಯಜ್ಞವ ಮಾಡುವ ಚಾಂಡಾಲ ರಾಜ
ಪುರೋಹಿತ ಮಾತ್ರ ಕ್ಷತ್ರಿಯ ಋಷಿಯು
ತ್ರಿಶಂಕು ಸ್ವರ್ಗಕೆ ಹೋಗಲು ಸಾಧ್ಯವೆ
ದೇವರು ಪಡೆಯರು ಹವಿಸನು ಇವರದು || ೨೮೩ ||

ಕೇಳುತ ಈ ನುಡಿ ಆದನು ಕಿಡಿಕಿಡಿ
ರೋಷವು ಮುಚ್ಚಿತು ಕೌಶಿಕನಾಗಲೆ
ಕೈಯಲಿ ಹಿಡಿಯುತ ನೀರನು ಕೂಡಲೆ
ಮಾಡಿಹೆ ತಪವನು ಉಗ್ರದಿ ನಾನು || ೨೮೪ ||

ಕೊಡುವೆನು ಶಾಪವ ವಸಿಷ್ಠ ಸುತರಿಗೆ
ಆಗಲಿ ಎಲ್ಲರು ಬೂದಿಯು ಈಗಲೆ
ಆಗುತ ಚಂಡಾಲ ಸಪ್ತಶತಜನ್ಮ
ಆಗಲಿ ರೂಪವು ವಿಕಾರ ಕುರೂಪ || ೨೮೫ ||

ತಿರುಗಲಿ ತಿನ್ನುತ ಹೆಣಗಳ ಮನುಜರ
ತಿನ್ನಲಿ ಇನ್ನೂ ನಾಯಿಯ ಮಾಂಸವ
ಶಾಪವು ಫಲಿಸಿತು ಕೂಡಲೆ ಅದುವೇ
ವಸಿಷ್ಠಕುವರರು ಆದರು ಬೂದಿಯು || ೨೮೬ ||

ನೋಡುತ ಎಲ್ಲವ ಬೇರೆಯ ಮುನಿಗಳು
ಬಂದರು ಎಲ್ಲರು ಸುಮ್ಮನೆ ಹೆದರುತ
ಯಾಗವು ಸಾಗಿತು ನಿರ್ವಿಘ್ನದಿಂದ
ಬಂದಿತು ಸಮಯವು ಹವಿಸನು ಕೊಡುವ || ೨೮೭ ||

ಹವಿಸನು ಹಾಕಲು ನಡೆಯಿತು ಸಡಗರ
ಪಡೆಯಲು ಕರೆದರು ದೇವರು ಎಲ್ಲರ
ಬಾರರು ಯಾರೂ ಹವಿಸನು ಪಡೆಯಲು
ಕೌಶಿಕ ಉರಿದನು ಕೋಪದ ಭರದಿ || ೨೮೮ ||

ರಾಜನೆ ದೇವರು ಬರದಿರೆ ಹೋಗಲಿ
ಎನ್ನಯ ಶಕ್ತಿಯ ನೋಡೆಲೊ ನೀನು
ತಪಸಿನ ಬಲದಿಂ ಕಳಿಸುವೆ ನಿನ್ನನು
ಸ್ವರ್ಗಕೆ ಈಗಲೆ ದೇಹದ ಸಹಿತದಿ || ೨೮೯ ||

ಎನ್ನುತ ಹಚ್ಚಿದ ತಪವನು ಪಣಕೆ
ನೋಡುತ ನೋಡುತ ಏರಿದ ರಾಜನು
ಮುಟ್ಟಿದ ಹಾಗೆಯೆ ಸ್ವರ್ಗದ ಬಾಗಿಲು
ತಡೆದನು ಇಂದ್ರನು ಕೂಡಲೆ ಅಲ್ಲಿಯೆ || ೨೯೦ ||

ಅಂದನು ರಾಜಗೆ ಹೋಗೆಲೊ ನೀನು
ಗುರುವಿನ ಶಾಪದಿ ಮುಚ್ಚಿಹೆ ಕಾರಣ
ಬರುವದು ಸಾಧ್ಯವೆ ಸ್ವರ್ಗದ ಒಳಗೆ
ಎನ್ನುತ ತಡೆದನು ಬಾಗಿಲ ಹೊರಗೆ || ೨೯೧ ||

ಅಲ್ಲದೆ ನೂಕಿದ ರಾಜನ ಕೆಳಗಡೆ
ಬೀಳೆಲೊ ರಾಜನೆ ತಲೆಕೆಳಗಾಗಿ
ಕಿರುಚಿದ ರಾಜನು ಕೌಶಿಕ ಮುನಿಯೇ
ಉಳಿಸೆಲೊ ಎನ್ನನು ಬೀಳುವ ಮೊದಲು || ೨೯೨ ||

ಕೌಶಿಕ ತಡೆದನು ಅವನನು ಅಲ್ಲಿಯೇ
ಅಂದನು ರಾಜಗೆ ನಿಲ್ಲಿಸಿ ಅಲ್ಲಿಯೆ
ಸೃಜಿಸುವೆ ಸ್ವರ್ಗವ ಬೇರೆಯೆ ನಿನಗೆ
ಮುರಿಯುವೆ ಸೊಕ್ಕನು ದೇವಗಣಗಳ || ೨೯೩ ||

ಎನ್ನುತ ಹೊರಟನು ಸಗ್ಗವ ಮಾಡಲು
ದಕ್ಷಿಣ ದಿಕ್ಕಿಗೆ ಮಾಡಿದನವನೂ
ಸಪ್ತರ್ಷಿಮಂಡಲ ಬಂದಿತು ಬೇರೆಯೆ
ಸೃಜಿಸಲು ನಿಂತನು ಬೇರೆಯ ಇಂದ್ರನ || ೨೯೪ ||

ಸೃಜಿಸಿದ ಕೆಲವರು ದೇವರ ಅವನು
ನೋಡುತ ಎಲ್ಲವ ಹೆದರಿತು ಸುರಗಣ
ಬಂದರು ಎಲ್ಲರು ಕೌಶಿಕನಲ್ಲಿಗೆ
ಸಂಧಿಯ ಮಾಡಲು ಕೋರಿದರೆಲ್ಲರು || ೨೯೫ ||

ಗುರುವಿನ ಶಾಪವು ಇರುವದು ರಾಜಗೆ
ಸ್ವರ್ಗಕೆ ಬರುವದು ಸಾಧ್ಯವು ಇದೆಯೇ
ಎನ್ನಲು ಕೌಶಿಕನೆಂದನು ಆಗಲೆ
ಕೊಟ್ಟಿಹೆ ವಚನವ ರಾಜಗೆ ನಾನು || ೨೯೬ ||

ಮುರಿಯಲು ಸಿದ್ಧನು ಆಗೆನು ಎಂದೂ
ದೊರೆಯಲೇಬೇಕು ಸಗ್ಗವು ಅವನಿಗೆ
ಸೃಜಿಸಿದ ನಕ್ಷತ್ರ ಇರಲೇಬೇಕು
ಒಪ್ಪುವದಾದರೆ ಹೇಳಿರಿ ಎನಗೆ || ೨೯೭ ||

ಒಪ್ಪಿದರಾಗಲೆ ಸುರವರರೆಲ್ಲರು
ವೈಶ್ವಾನರ ಜ್ಯೋತಿಯು ಹೊರಗಡೆ ಇರೆ
ತ್ರಿಶಂಕು ರಾಜನು ಅವುಗಳ ಮಧ್ಯದಿ
ಹೊಳೆಯುತ ಪಡೆದನು ತ್ರಿಶಂಕು ಸಗ್ಗವ || ೨೯೮ ||

ಯಾಗವು ಮುಗಿಯಿತು ಋಷಿಗಳು ಹೋದರು
ಯಾಗಕೆ ಆಯಿತು ಬಹುತರ ವಿಘ್ನವು
ಹೋಗುವೆ ಬೇರೆಡೆ ತಪವನು ಮಾಡಲು
ದಕ್ಷಿಣ ದಿಕ್ಕಿಗೆ ಪುಷ್ಕರ ತೀರ್ಥವು || ೨೯೯ ||

ಹೋಗುವೆ ಅಲ್ಲಿಗೆ ಮಾಡುವೆ ತಪವನು
ಎನ್ನುತ ನಡೆದನು ಪುಷ್ಕರ ತೀರ್ಥಕೆ
ನಿರತನು ಆದನು ಕಠೋರ ತಪದಲಿ
ನಿಗ್ರಹ ಮಾಡುತ ಇಂದ್ರಿಯವೆಲ್ಲವ || ೩೦೦ ||

## ೨೪. ಶುನಶ್ಶೇಪನ ಕಥೆ

ಕಳೆಯಿತು ಕಾಲವು ಇಳೆಯಲಿ ಆಗಲೆ
ಆಳುತ ಇದ್ದನು ಅಂಬರೀಷ ದೊರೆ
ಇದ್ದನು ಅಧಿಪತಿ ಅಯೋಧ್ಯೆಯಲ್ಲಿ
ಮಾಡಿದ ಯಾಗವ ಬಿಟ್ಟನು ಕುದುರೆಯ || ೩೦೧ ||

ಇಂದ್ರನು ಒಯ್ದನು ಕುದುರೆಯ ಹೇಳದೆ
ಕುದುರೆಯು ಇಲ್ಲದೆ ನಡೆಯದು ಯಾಗವು
ಯಜ್ಞದ ಕುದುರೆಯು ಸಿಗದಿರೆ ರಾಜನು
ನರಬಲಿ ಕೊಡದಿರೆ ನಡೆಯದು ಎಂದರು || ೩೦೨ ||

ರಾಜನು ಹುಡುಕಿದ ನರಬಲಿಗಾಗಿಯೆ
ಭೃಗುತುಂಗಗಿರಿಗೆ ಬಂದನು ಕೊನೆಗೆ
ಅಲ್ಲಿಯೆ ಇದ್ದನು ಋಚೀಕ ಋಷಿವರ
ಅವನಿಗೆ ಇದ್ದರು ಮೂವರು ಮಕ್ಕಳು || ೩೦೩ ||

ಬೇಕಿದೆ ಮುನಿಗಳೆ ಯಜ್ಞಕೆ ಬಲಿಯು
ಕೊಡುವದು ಆದರೆ ನಿಮ್ಮಯ ಪುತ್ರನ
ಕೊಡುವೆನು ಗೋಧನ ಲಕ್ಷದ ಮೇಲೆಯೆ
ಅಲ್ಲದೆ ಕೊಡುವೆನು ಧನಕನಕಾದಿಯು || ೩೦೪ ||

ಋಚೀಕ ಒಪ್ಪನು ಮೊದಲನೆ ಮಗನಿಗೆ
ತಾಯಿಯು ಒಪ್ಪಳು ಮೂರನೆ ಮಗನಿಗೆ
ಉಳಿದನು ನಡುವಿನ ಸುತಶುನಶ್ಶೇಪ
ಬಂದನು ಆವನೇ ಮುಂದಕೆ ತಾನೇ || ೩೦೫ ||

ಪ್ರಭುವೇ ನೋಡಿದೆ ತಂದೆಗೆ ಹಿರಿಯನು
ತಾಯಿಗೆ ಕಿರಿಯನು ಇಷ್ಟರು ಎಂದು
ಆಯಿತು ಅರ್ಥವು ಕೊಟ್ಟರು ಎನ್ನನು
ನಡೆಯಿರಿ ಬರುವೆನು ಯಜ್ಞಕೆ ನಾನೇ || ೩೦೬ ||

ರಾಜನು ಹೋಗುತ ದಾರಿಯ ಮಧ್ಯದಿ
ತಂಗಿದ ಒಂದಿನ ಪುಷ್ಕರ ತೀರ್ಥದಿ
ಕೌಶಿಕ ಕಂಡನು ಶುನಶ್ಶೇಪನನು
ತನ್ನಯ ಅಕ್ಕನ ಮಗನೇ ಅವನು || ೩೦೭ ||

ಬೇಡಿದನಾಗಲೆ ಕೌಶಿಕ ಮಾವಗೆ
ಮುನಿವರ ನಿನ್ನಯ ಶಕ್ತಿಯ ಬಲ್ಲೆನು
ಉಳಿಸುತ ಎನ್ನನು ರಕ್ಷೆಯ ಕರುಣಿಸು
ಕೇಳುತ ಕೌಶಿಕ ಮುನಿಮನ ಕರಗಿತು ||೩೦೮ ||

ಕರೆದನು ತನ್ನಯ ಮಕ್ಕಳನೆಲ್ಲರ
ಅಂದನು ಅವರಿಗೆ ಹೋಗಿರಿ ನೀವೇ
ಯಜ್ಞದ ಬಲಿಯಲಿ ಮೋಕ್ಷವು ಸಿದ್ಧವು
ಒಪ್ಪರು ಯಾರೂ ನಕ್ಕರು ಎ ರು || ೩೦೯ ||

ನೋಡುತ ಹಾಸ್ಯವ ಉಕ್ಕಿತು ಕೋಪವು
ಶಪಿಸಿದ ಮಕ್ಕಳ ಸಿಟ್ಟಲಿ ಕೌಶಿಕ
ಆಗಿರಿ ಎಲ್ಲರು ಬೂದಿಯು ಈಗಲೆ
ಪಡೆಯಿರಿ ಗತಿಯನು ವಸಿಷ್ಠಪುತ್ರರ || ೩೧೦ ||

ನಂತರ ಕರೆದನು ಶುನಶ್ಶೇಪನನು
ಹೇಳಿದನವನಿಗೆ ರಕ್ಷಾಮಂತ್ರವ
ಜಪಿಸುತ ಮಂತ್ರವ ಅಗ್ನಿಯ ವಂದಿಸು
ಪಡೆಯುವೆ ರಕ್ಷೆಯ ಮಂತ್ರದ ಫಲದಿಂ || ೩೧೧ ||

ಮಂತ್ರವ ಪಡೆದನು ನಿಶ್ಚಯ ಮನದಿಂ
ಓಡಿದ ಕೂಡಲೆ ರಾಜನ ಕಡೆಗೆ
ನಡೆಯಿರಿ ದೊರೆಗಳೆ ಯಾಗದ ಶಾಲೆಗೆ
ಬಲಿಯನು ಮುಗಿಸಿರಿ ನನ್ನದು ಕೂಡಲೆ || ೩೧೨ ||

ಒಯ್ದರು ಅವನನು ಯಾಗದ ಕಂಬಕೆ
ಹಾಕುತ ಕೆಂಪಿನ ಹೂಗಳ ಮಾಲೆಯ
ಮಂತ್ರವ ಪಠಿಸಲು ಇಂದ್ರೋಪೇಂದ್ರರು
ಬಂದರು ಕೊಟ್ಟರು ದೀರ್ಘಾಯುಷ್ಯನು || ೩೧೩ ||

ಕೊಟ್ಟರು ರಾಜಗೆ ಯಜ್ಞದ ಫಲವನು
ಅಂತೆಯೆ ಉಳಿದನು ಶುನಶ್ಯೇಪನು
ನಂತರ ಕೌಶಿಕ ಮಾಡಿದ ತಪವನು
ಸಾಸಿರ ವರುಷವ ಪುಷ್ಕರತೀರ್ಥದಿ || ೩೧೪ ||

ಕೇಳುತ ಕೌಶಿಕ ಕತೆಯನು ರಾಮನು
ಅಂದನು ನಿಜಕೂ ಕೌತುಕ ಚರಿತೆಯು
ಆಯಿತೆ ಕತೆಯಿದು ಇಲ್ಲಿಯ ವರೆಗೆ
ಮುಗಿಯದು ಎಂದರು ಶತಾನಂದರು || ೩೧೫ ||

ಕಳೆದವು ಸಾಸಿರ ವರ್ಷವು ಮತ್ತೂ
ಮಾಡಿದ ತಪವನು ಜಾಗ್ರತೆ ಹೆಚ್ಚುತ
ಬ್ರಹ್ಮದೇವನೇ ಬಂದನು ಎದುರಿಗೆ
ಕರೆದರು ಅವನನು ಋಷಿವರನೆಂದು || ೩೧೬ ||

ತಡೆಯದೆ ಮಾಡಿದ ತಪವನು ಹಾಗೆಯೆ
ಒಂದಿನ ಬಂದಳು ಮೇನಕೆ ಅಪ್ಸರೆ
ಸುಂದರಿ ಚೆಲುವೆಯು ಅಂದದ ಬೊಂಬೆಯು
ನೀರಲಿ ನೋಡುತ ಮೋಹಿತನಾದನು || ೩೧೭ ||

ಬೇಡಿದ ಅವಳಲಿ ದೇಹದ ಸಂಗವ
ಪಡೆದನು ಸುಖವನು ದಶವರ್ಷಗಳ
ಕಳೆಯಿತು ಮೋಹವ ತಿಳಿದನು ಸ್ಥಿತಿಯನು
ಇರುವದು ಇದುವೇ ಇಂದ್ರನ ಚೇಷ್ಟೆಯು || ೩೧೮ ||

ಕಳೆಯಲು ಎನ್ನಯ ತಪವನು ಅವನು
ಮಾಡಿದ ಚೇಷ್ಟೆಯ ತೊರೆದನು ಅವಳನು
ಹೊರಟನು ಕೌಶಿಕ ಉತ್ತರ ದಿಕ್ಕಿಗೆ
ಗೆಲ್ಲುವೆನೆಂದನು ಕಾಮನ ಶಕ್ತಿಯ || ೩೧೯ ||

ನಿಂದನು ದಡದಲಿ ಕೌಶಿಕೀ ನದಿಯ
ಮಾಡಿದ ತಪವನು ಸಾವಿರ ವರುಷವ
ಪಡೆದನು ಅಲ್ಲಿಯೆ ಬ್ರಹ್ಮರ್ಷಿಪದವ
ಆದರು ಕರೆಯರು ಜಿತೇಂದ್ರಿಯನೆಂದು || ೩೨೦ ||

ಬಿಡದಲಿ ಮಾಡಿದ ತಪವನು ಮುಂದೆ
ಇಂದ್ರಗೆ ಹುಟ್ಟಿತು ಭೀತಿಯು ಇದರಲಿ
ಕಳಿಸಿದ ರಂಭೆಯ ಕೌಶಿಕನೆಡೆಗೆ
ಮೋಹಿಸಿ ತಪವನು ಕೆಡಿಸಲು ಅವನ || ೩೨೧ ||

ಬಂದಿತು ವಸಂತ ಮಾಸವು ಆಗಲೆ
ಇಂದ್ರನು ಮಾಡಿದ ಕೋಗಿಲೆ ಧ್ವನಿಯ
ರಂಭೆಯು ಕುಣಿದಳು ಯೋಗಿಯ ಮುಂದೆ
ಕಣ್ಗಳ ತೆರೆದನು ಕ್ಷೋಭೆಯ ಮನದಿಂ || ೩೨೨ ||

ನೋಡಿದ ಎಲ್ಲವ ಜ್ಞಾನದ ಕಣ್ಣಲಿ
ತಿಳಿಯಿತು ಅವನಿಗೆ ಇಂದ್ರನ ಚೇಷ್ಟೆಯು
ಮಾಡಿದ ಕರ್ಮಕೆ ಭೋಗಿಸು ಫಲವನು
ಬಿದ್ದಿರು ಕಲ್ಲಿನ ರೂಪದಿ ನೀನು || ೩೨೩ ||

ಕ್ಷಣದಲಿ ಹೊಳೆಯಿತು ಸಿಟ್ಟಿಗೆ ಬಂದುದು
ಮಾಡಿದ ನಿಶ್ಚಯ ಸಿಟ್ಟನು ಗೆಲೆಯಲು
ಮಾತನು ಬಿಡುವೆನು ಉಸಿರನು ಕಟ್ಟುವೆ
ಎನ್ನುತ ನಡೆಸಿದ ತಪವನು ಘೋರ ‖ ೩೨೪ ‖

ಕೊನೆಯಲಿ ಶಿರದಲಿ ಕಂಡಿತು ಹೊಗೆಯು
ತಪಸಿನ ಜ್ವಾಲೆಯು ತುಂಬಿತು ನಭವನು
ದೇವರು ಬಂದರು ಬೊಮ್ಮನ ಕಡೆಗೆ
ಬೇಡುತ ಕೌಶಿಕ ತಪವನು ತಡೆಯಲು ‖ ೩೨೫ ‖

ಕಾಮಕ್ರೋಧವ ಗೆದ್ದಿಹ ಕೌಶಿಕ
ಎಮ್ಮಯ ಯತ್ನವ ಮುರಿದಿಹನವನು
ದೋಷವ ಎಷ್ಟು ಕಾಣೆವು ಅವನಲಿ
ಆಗಿಹನೀಗವ ಬ್ರಹ್ಮರ್ಷಿ ನಿಜಕು ‖ ೩೨೬ ‖

ಸುಮ್ಮನೆ ಕುಳಿತರೆ ಸುಡುವದು ಜಗವು
ಜ್ಯೋತಿಗಳೆಲ್ಲವು ಆಗಿವೆ ಮಂಕು
ಪರ್ವತ ಎಲ್ಲವು ಉದುರುತ ಬೀಳುತ
ಸಾಗರವೆಲ್ಲವು ಉಕ್ಕಿದೆ ಮೇಲಕೆ ‖ ೩೨೭ ‖

ಭೂಮಿಯ ಕಂಪನ ತಡೆಯೆವು ನಾವು
ಗಾಳಿಯು ವೇಗವು ಆಗಿದೆ ಭೀಕರ
ಜಗವನು ರಕ್ಷಿಪ ದೇವರೆ ಇಲ್ಲವೆ
ಎನ್ನುತ ಎಲ್ಲರು ಕೇಳುತಲಿರುವರು ‖ ೩೨೮ ‖

ಜನತೆಯು ಸಾಸ್ತಿಕ ಆಗುವ ಮೊದಲೇ
ಕೌಶಿಕ ಇಂದ್ರನು ಆದರು ಸರಿಯೇ
ಕೊಡುತಲಿ ಅವನಿಗೆ ಬೇಡಿದ ವರವನು
ತಡೆಯಿರಿ ಈಗಲೆ ಮುಂದಿನ ಘೋರವ || ೩೨೯ ||

ಕೇಳುತ ಬಿನ್ನಪ ಬೊಮ್ಮನು ಅಂದನು
ಹೋಗಿರಿ ಎಲ್ಲರು ಚಿಂತೆಯ ತೊರೆಯಿರಿ
ಎನ್ನುತ ಬಂದನು ಕೌಶಿಕನೆದುರಿಗೆ
ಕಣ್ಣನು ತೆರೆಯಲೊ ಕೌಶಿಕ ಮುನಿಯೇ || ೩೩೦ ||

ಆಗಿಹೆ ಕೌಶಿಕ ಬ್ರಹ್ಮರ್ಷಿ ನಿಜಕೂ
ತೃಪ್ತನು ಆಗಿಹೆ ನಿನ್ನಯ ತಪದಿಂ
ಪಡೆದಿಹೆ ಮುನಿಯೇ ಬ್ರಹ್ಮತೇಜವನು
ಕೊಟ್ಟಿಹೆ ತೀರದ ದೀರ್ಘಾಯುಸ್ಸನು || ೩೩೧ ||

ಬ್ರಾಹ್ಮಣವರನೇ ಮಂಗಳವಾಗಲಿ
ಸಿದ್ಧಿಯ ಪಡೆದಿಹೆ ಮುಗಿಸೆಲೊ ತಪವನು
ದೇವರು ಎಲ್ಲರು ಬಂದಿರೆ ನೋಡಲು
ಬ್ರಹ್ಮರ್ಷಿಯಾಗಿ ಬಾಳಲು ಏಳೈ || ೩೩೨ ||

ಕಣ್ಣನು ತೆರೆಯುತ ನೋಡಿದನೆಲ್ಲರ
ನಮಿಸುತ ಅವರಿಗೆ ಕೇಳಿದ ಬೊಮ್ಮನ
ಬ್ರಹ್ಮರ್ಷಿಪದವ ಪಡೆದಿಹೆನಾದರೆ
ಒಲಿಯಲಿ ವೇದಗಳೆಲ್ಲವು ಎನಗೆ || ೩೩೩ ||

ಒಲಿಯಲಿ ಓಂಕಾರ ವಷಟ್ಕಾರಗಳು
ಧನುರ್ವಿದ್ಯೆ ಬ್ರಹ್ಮವಿದ್ಯೆಯಲಿ
ಸಿದ್ಧಿಯ ಪಡೆದಿಹ ವಸಿಷ್ಠ ಒಲಿಯಲಿ
ವಸಿಷ್ಠರೆಂದಡೆ ಒಪ್ಪುವೆನೀಗಲೆ || ೩೩೪ ||

ಕರೆಯುವ ವಸಿಷ್ಠಮುನಿಗಳ ಇಲ್ಲಿಗೆ
ಒಪ್ಪಿಸದಿದ್ದರೆ ಒಪ್ಪೆನು ಎಂದಿಗು
ಎನ್ನುತ ಕೌಶಿಕ ನುಡಿಯಲು ಎಲ್ಲರು
ಹೋದರು ವಸಿಷ್ಠ ಋಷಿಯನು ಕರೆಯಲು || ೩೩೫ ||

ಬಂದರು ವಶಿಷ್ಠ ಶಿಷ್ಯರ ಸಮೇತ
ಬ್ರಹ್ಮರ್ಷಿಮುನಿಯೆ ಸಂಶಯ ಬೇಡಾ
ಗೆದ್ದಿಹೆ ಕಾಮವ ಕ್ರೋಧವ ಎಲ್ಲಾ
ಸಿದ್ಧನು ಶುದ್ಧನು ಆಗಿಹೆ ನೀನು || ೩೩೬ ||

ಹೀಗದು ಪಡೆದರು ಕೌಶಿಕ ಮುನಿಗಳು
ಬ್ರಹ್ಮರ್ಷಿಪದವನು ತಪಸಿನ ಖಣಿಯು
ಛಲದಲಿ ಅವನನು ಮೀರಲು ಇಲ್ಲವು
ಮುಗಿಸಿದ ಕತೆಯನು ಶತಾನಂದನು || ೩೩೭ ||

## ೨೫. ಧನುರ್ಭಂಗ

ನೆನೆಸುತ ಚರಿತೆಯ ಕೌಶಿಕ ಮುನಿಗಳ
ಕಳೆದರು ರಾತ್ರಿಯ ರಾಮಲಕ್ಷ್ಮಣರು
ಬೆಳಗಾಗಲು ಪ್ರಭು ಕರೆಸಿದ ಋಷಿಗಳ
ಜೊತೆಗೇ ರಾಮನ ಅನುಜನ ಸಹಿತ || ೩೩೮ ||

ಕೊಡುತಲಿ ಅರ್ಘ್ಯವ ಪಾದ್ಯವ ಎಲ್ಲವ
ಕೇಳಿದ ಜನಕನು ಕೌಶಿಕಮುನಿಗೆ
ಸಿದ್ಧನು ನಿಮ್ಮಯ ಸೇವೆಗೆ ನಾನು
ಅಪ್ಪಣೆ ಕೊಡುವದು ಮಾಡುವದೇನು || ೩೩೯ ||

ಮುನಿಗಳು ಅಂದರು ರಾಜಶ್ರೇಷ್ಠನೆ
ಇರುವರು ಈರ್ವರು ದಶರಥ ಕುವರರು
ಇಕ್ಷ್ವಾಕು ವಂಶದಿ ಹುಟ್ಟಿದ ವೀರರು
ಅಲ್ಲದೆ ಎನ್ನಯ ಮೆಚ್ಚಿನ ಶಿಷ್ಯರು || ೩೪೦ ||

ರಾಮನು ಇವರಲಿ ಅಗ್ರಜನಿಹನು
ನಿನ್ನಯ ಧನುವನು ನೋಡಲು ಇಚ್ಛಿಪ
ತೋರಿಸು ಅವನಿಗೆ ಧನುವನು ರಾಜನೆ
ಹೇಳುತ ಬಿಲ್ಲಿನ ಕತೆಯನು ಈಗಲೆ || ೩೪೧ ||

ಜನಕನು ಹೇಳಿದ ಕತೆಯನು ಈ ತೆರ
ಹಿಂದಕೆ ದಕ್ಷನ ಯಜ್ಞದ ಕಾಲದಿ
ರುದ್ರಗೆ ಹವಿಸನು ಕೊಡದೇ ಇರಲು
ಕೋಪದಿ ಉರಿಯುತ ರುದ್ರನು ತಾನು || ೩೪೨ ||

ಹಿಡಿದನು ಬಿಲ್ಲನು ತರಿಯಲು ದೇವರ
ಕ್ಷಮೆಯನು ಕೇಳಲು ಆದನು ಶಾಂತನು
ಆಗಲೆ ಕೊಟ್ಟನು ಬಿಲ್ಲನು ಇದನು
ಎಮ್ಮಯ ಪೂರ್ವಜ ದೇವರಾತನಿಗೆ || ೩೪೩ ||

ಅಂದಿನ ದಿನದಿಂ ಇಂದಿನ ವರೆಗೂ
ಇರುವದು ಬಿಲ್ಲದು ಎಮ್ಮಯ ಹತ್ತಿರ
ಅಲ್ಲದೆ ಒಂದಿನ ಯಾಗವ ಮಾಡಲು
ಭೂಮಿಯ ಉತ್ತೆನು ನೇಗಿಲದಿಂದಲಿ || ೩೪೪ ||

ನೇಗಿಲ ಗೆರೆಯಲಿ ಸಿಕ್ಕಿತು ಶಿಶುವದು
ಕಾರಣ ಕರೆದೆನು ಸೀತೆಯು ಎಂದು
ಭೂಮಿಯ ಕುವರಿಯು ಅಯೋನಿಜೆ ಮಗಳು
ಇರುವಳು ನಿಶ್ಚಿತ ವೀರಶುಲ್ಕೆಯು || ೩೪೫ ||

ಬಂದರು ಎಷ್ಟೋ ರಾಜಕುಮಾರರು
ತೋರಿದೆ ಅವರಿಗೆ ರುದ್ರನ ಧನುವನು
ಹೆದೆಯನು ಏರಿಸಿ ಗೆಲ್ಲಲು ಸಾಧ್ಯವು
ಇಚ್ಛೆಯು ಇದ್ದರೆ ಮಾಡಿರಿ ಯತ್ನವ || ೩೪೬ ||

ಬಿಲ್ಲನು ಮಣಿಸುವ ಮಾತನೆ ಬಿಡಿರಿ
ಬಿಲ್ಲನು ಎತ್ತಲು ಆಗದು ಅವರಿಗೆ
ಕೋಪದಿ ಎಲ್ಲರು ಬಂದರು ಯುದ್ಧಕೆ
ದೇವರ ಕರುಣದಿ ಗೆದ್ದೆನು ಯುದ್ಧದಿ || ೩೪೭ ||

ಮುನಿಗಳೆ ಧನುವನು ತೋರುವೆ ಇವರಿಗೆ
ರಾಮನು ಹೆದೆಯನು ಏರಿಸಿ ಬಂದರೆ
ಕೊಡುವೆನು ಅವನಿಗೆ ಮಗಳನು ಸೀತೆಯ
ಮದುವೆಯ ಮಾಡುವೆ ಸಂಭ್ರಮದಿಂದಲಿ || ೩೪೮ ||

ರಾಜನ ಅಪ್ಪಣೆ ಪಡೆಯುತ ಸಚಿವರು
ತಂದರು ಬಿಲ್ಲನು ಗಾಡಿಯ ಮೇಲೆ
ಇದ್ದವು ಗಾಡಿಗೆ ಗಾಲಿಗಳೆಂಟು
ಜಗ್ಗುತ ಮನುಜರು ಐದುಸಾವಿರ || ೩೪೯ ||

ಜನಕನು ನಮಿಸುತ ಕೌಶಿಕಮುನಿಗೆ
ನೋಡಿರಿ ಇದುವೇ ರುದ್ರನ ಬಿಲ್ಲು
ಸುರಾಸುರ ಯಕ್ಷ ಗಂಧರ್ವಕಿನ್ನರ
ಮಹೋರಗರಾರೂ ಮಣಿಸರು ಇದನು || ೩೫೦ ||

ತರಿಸಿಹೆ ಬಿಲ್ಲನು ತೋರಿಸಿ ರಾಮಗೆ
ಕೇಳುತ ಎಲ್ಲವ ಕೌಶಿಕಮುನಿಗಳು
ವತ್ಸನೆ ರಾಮನೆ ನೋಡೆಲೊ ಬಿಲ್ಲನು
ಕೂಡಲೆ ರಾಮನು ಹೋದನು ಅಲ್ಲಿಗೆ || ೩೫೧ ||

ತೆರೆಯುತ ಕಬ್ಬಿಣ ಪೆಟ್ಟಿಗೆ ಮುಚ್ಚಳ
ನೋಡಿದ ಧನುವನು ಕಣ್ಣನು ಬಿಟ್ಟು
ತಿರುಗುತ ಜನಕನ ಕೌಶಿಕನೆಡೆಗೆ
ಅಪ್ಪಣೆ ನೀಡಿರಿ ಮುಟ್ಟಲು ಬಿಲ್ಲನು || ೩೫೨ ||

ತಿಳಿಯುವೆ ಅದರದು ಶಕ್ತಿಯ ನಾನು
ಸಾಧ್ಯವು ಇರುವದೆ ಎಂಬುದನರಿಯುವೆ
ಒಪ್ಪಿದರಿಬ್ಬರು ಜನಕನು ಕೌಶಿಕ
ರಾಮನು ಹಿಡಿದನು ಬಿಲ್ಲಿನ ಮಧ್ಯವ || ೩೫೩ ||

ನೋಡುತ ನೋಡುತ ಎತ್ತಿದ ಅದನು
ಹೆದೆಯನು ಏರಿಸಿ ಬಾಣವ ತೊಟ್ಟನು
ಜಗ್ಗಿದ ಹಗ್ಗವ ಕರ್ಣದ ವರೆಗೆ
ಮುರಿಯಿತು ಬಿಲ್ಲದು ಸಿಡಿಲಿನ ಅಬ್ಬರ || ೩೫೪ ||

## ೨೬. ಸೀತಾಕಲ್ಯಾಣ

ಭೂಮಿಯು ಅದುರಿತು ವಿಸ್ಮಿತರಾದರು
ಜನಕಗೆ ಆಯಿತು ಸಂತಸ ಸಂಭ್ರಮ
ರಾಮನ ಶೌರ್ಯವು ಕಲ್ಪನೆ ಮೀರಿದೆ
ನೋಡಿದೆ ಇಂದೆಯೆ ನಾನೇ ಧನ್ಯನು || ೩೫೫ ||

ಕೌಶಿಕ ಮುನಿಗಳೆ ಅಪ್ಪಣೆ ನೀಡಿರಿ
ಕರೆಸುವೆ ಕೂಡಲೆ ದಶರಥರಾಜನ
ಮಾಡುವೆ ಮದುವೆಯ ಸಂಭ್ರಮದಿಂದಲಿ
ಕೌಶಿಕ ಎಂದರು 'ಆಗಲಿ' ಎಂದು || ೩೫೬ ||

ಜನಕನ ದೂತರು ಮುಟ್ಟುತ ಅಯೋಧ್ಯೆ
ಕೊಟ್ಟರು ರಾಜಗೆ ಶುಭವಿಹ ಸುದ್ದಿಯ
ಜನಕನ ಬಿನ್ನಹ ಕೌಶಿಕ ಸಂತನ
ದಶರಥ ಹೊರಟನು ಪರಿವಾರಸಹಿತ || ೩೫೭ ||

ಸ್ವಾಗತ ಕೋರುತ ದಶರಥ ರಾಜಗೆ
ಕೇಳಿದ ಒಪ್ಪಿಗೆ ಮದುವೆಯ ಮಾಡಲು
ದಶರಥ ಒಪ್ಪುತ ಸಂತಸದಿಂದಲಿ
ತಂಗಿದ ಜನಕನ ಅತಿಥಿಯು ಆಗುತ || ೩೫೮ ||

ಅಂದೆಯೆ ನಿಶ್ಚಯ ಕಾರ್ಯವು ಆಯಿತು
ರಾಮನ ಜೊತೆಗೆ ಜಾನಕಿ ಮದುವೆಯ
ಲಕ್ಷ್ಮಣ ಜೊತೆಗೆ ಊರ್ಮಿಳೆ ಮದುವೆಯ
ಮರುದಿನ ಕರೆಸಿದ ತನ್ನಯ ತಮ್ಮನ ॥ ೩೫೯ ॥

ಜನಕನು ಅಂದನು ದಶರಥ ದೊರೆಗೆ
ಈತನು ತಮ್ಮನು ಕುಶಧ್ವಜರಾಜ
ಸಾಂಕಾಶ್ಯಪುರಕೆ ಅಧಿಪತಿ ಇವನು
ಇರುವರು ಇವನಿಗೆ ಪುತ್ರಿಯರಿಬ್ಬರು ॥ ೩೬೦ ॥

ಇರುವರು ಮಕ್ಕಳು ಸುಂದರ ಸುಗುಣರು
ಹೆಸರು ಮಾಂಡವೀ ಶೃತಕೀರ್ತಿಯೆಂದು
ಕೊಡುವೆನು ಅವರನು ಭರತ ಶತೃಘ್ನಗೆ
ಒಪ್ಪಿತ ಕರುಣೆಯ ತೋರಿರಿ ಎನಗೆ ॥ ೩೬೧ ॥

ದಶರಥ ನೋಡಿದ ಋಷಿಗಳ ಕಡೆಗೆ
ಒಪ್ಪಿಗೆ ಕೊಟ್ಟರು ವಸಿಷ್ಠ ಕೌಶಿಕ
ಅಂದರು ಎಲ್ಲರು ಸುಂದರ ಗಳಿಗೆಯು
ವಂಶಗಳೆರಡೂ ಕೂಡುವ ಸಮಯವು ॥ ೩೬೨ ॥

ಮುಹೂರ್ತವ ತೆಗೆದರು ಶತಾನಂದರು
ಉತ್ತರಾ ಫಾಲ್ಗುನಿ ನಕ್ಷತ್ರದಲಿಯೆ
ಆಯಿತು ಮದುವೆಯು ವೈಭವದಿಂದಲಿ
ಹಾಡುತ ಕುಣಿಯುತ ನಲಿದರು ಎಲ್ಲರು ॥ ೩೬೩ ॥

ಮಾರನೆ ದಿನವೇ ಕೌಶಿಕ ಹೊರಟನು
ನಂತರ ಹೊರಟನು ದಶರಥ ನರಪತಿ
ಮಕ್ಕಳು ಸೊಸೆಯರು ಎಲ್ಲರು ಸಹಿತ
ಜನಕನು ಅನುಜನು ಕಳಿಸುತ ಎಲ್ಲರ || ೩೬೪ ||

## ೨೭. ಪರಶುರಾಮನಿಂದ ತಡೆ

ಚಲಿಸಿತು ದಶರಥ ಭೂಪತಿ ಸೈನ್ಯವು
ಹಿಂದೆಯೆ ಇದ್ದಿತು ಜನತೆಯ ಗಡಣವು
ಹೊರಟಿತು ನಿಬ್ಬಣ ಊರಿನ ಕಡೆಗೆ
ಕಂಡಿತು ಆಗಲೆ ಅಶುಭದ ಶಕುನವು || ೩೬೫ ||

ಗಾಳಿಯು ಎದ್ದಿತು ನೆಲವದು ನಡುಗಿತು
ಕತ್ತಲೆಗಟ್ಟಿತು ಸುತ್ತಲು ಎಲ್ಲಾ
ಗಿಡಗಳು ಬಿದ್ದವು ಧೂಳಿಯು ಮುಚ್ಚಿತು
ಕತ್ತಲೆಯಲ್ಲಿಯೇ ಭೀಮಾಕಾರನು || ೩೬೬ ||

ನಿಂತನು ಎದುರಿಗೆ ಭಾರ್ಗವ ರಾಮನು
ಕೈಯಲಿ ಕೊಡಲಿಯು ಬಿಲ್ಲಿನ ಸಹಿತದಿ
ಕಣ್ಣುಗಳೇನೋ ಬೆಂಕಿಯ ಉಂಡೆಯು
ದೇಹವು ಉಕ್ಕಿನ ಎರಕದ ಘಟ್ಟಿಯು || ೩೬೭ ||

ದಶರಥ ಭೂಪತಿ ಕುಸಿದನು ಕೆಳಗೆ
ಭಾರ್ಗವ ರಾಮನೊ ಕ್ಷತ್ರಿಯ ವೈರಿಯು
ಬಂದಿತು ರಾಮಗೆ ಕೊನೆಯದು ಗಳಿಗೆ
ತಡೆಯೆನು ಎಂದೂ ರಾಮನ ವಿಯೋಗ || ೩೬೮ ||

ಬಂದನು ಭಾರ್ಗವ ರಾಮನ ಕಡೆಗೆ
ರಾಮನೆ ಕೇಳಿಹೆ ನಿನ್ನಯ ಶೌರ್ಯವ
ಕೇಳಿದೆ ಧನುವನು ಮುರಿದಿಹ ವಿಷಯವ
ನಿಜಕೂ ಕಲ್ಪನೆ ಮಾಡದ ಸಂಗತಿ || ೩೬೯ ||

ತಂದಿಹೆ ಇಲ್ಲಿಯೆ ಬೇರೆಯ ಧನುವನು
ನೋಡುವೆ ನಿನ್ನಯ ಶಕ್ತಿಯ ಇಂದು
ಏರಿಸು ಹೆದೆಯನು ಬಾಣವ ಹೂಡೆಲೊ
ನಂತರ ಕಾದುವೆ ನಿನ್ನಯ ಜೊತೆಗೆ || ೩೭೦ ||

ಕೇಳುತ ಈ ನುಡಿ ದಶರಥನೆಂದನು
ಕೈಯನು ಮುಗಿಯುತ ಋಷಿವರ ಭಾರ್ಗವ
ತ್ಯಜಿಸುತ ಕ್ಷತ್ರಿಯ ರೋಷವ ನೀವು
ಶಾಂತರು ಆಗಿರಿ ರಾಮನ ಉಳಿಸಿರಿ || ೩೭೧ ||

ಸತ್ತರೆ ರಾಮನು ಉಳಿಯೆವು ಯಾರೂ
ಭೃಗುಕುಲಜಾತನೆ ಭಾರ್ಗವ ರಾಮನೆ
ಇಂದ್ರಗೆ ವಚನವ ಕೊಡುತಲಿ ನೀನು
ಇಟ್ಟಿಹೆ ಶಸ್ತ್ರವ ಕೆಳಗಡೆ ಅಂದೇ || ೩೭೨ ||

ಭೂಮಿಯನೆಲ್ಲವ ಬಿಟ್ಟಿಹೆ ನೀನು
ದಾನವ ಮಾಡಿದೆ ಕಶ್ಯಪಮುನಿಗೆ
ತಪವನು ನಡೆಸಿಹೆ ಮಹೇಂದ್ರ ಗಿರಿಯಲಿ
ಆದರು ಏಕದು ಈ ಪರಿ ಹಟವು || ೩೭೩ ||

ಭಾರ್ಗವ ಕೇಳಿದ ದಶರಥ ವಚನವ
ಬಂದನು ನೆಟ್ಟಗೆ ರಾಮನ ಕಡೆಗೆ
ಅಂದನು ಭಾರ್ಗವ ತೋರುತ ಧನುವನು
ಇದ್ದವು ಎರಡು ದಿವ್ಯ ಧನುಸುಗಳು || ೩೭೪ ||

ವಿಶ್ವಕರ್ಮನೇ ಮಾಡಿದ ಅವುಗಳ
ಒಂದನು ಕೊಟ್ಟರು ರುದ್ರನಿಗಾಗಲೆ
ಮುರಿದಿಹೆ ಜನಕನ ಹತ್ತಿರ ನೀನು
ಕೊಟ್ಟರು ಇದನು ವಿಷ್ಣುವಿನೆಡೆಗೆ || ೩೭೫ ||

ಬಂದಿದೆ ಇದುವೇ ಎನ್ನಯ ಕಡೆಗೆ
ತಂದೆಯು ಕೊಟ್ಟಿಹ ಬಿಲ್ಲನು ನೋಡು
ಬಿಲ್ಲನು ಹಿಡಿಯುತ ಬಾಣವ ಹೂಡು
ಸಾಧ್ಯವು ಆದರೆ ಯುದ್ಧವ ಮಾಡು || ೩೭೬ ||

ಕೇಳುತ ದರ್ಪದ ಭಾರ್ಗವ ನುಡಿಯನು
ಬಂದನು ರಾಮನು ಮುಂದಕೆ ಎದುರಿಗೆ
ಭಾರ್ಗವ ರಾಮನೆ ಕೇಳಿಹೆ ನಾನೂ
ನಿನ್ನಯ ಶಕ್ತಿಯ ಪೌರುಷ ಎಲ್ಲವ || ೩೭೭ ||

ಕಾಣುವೆ ಎನ್ನನು ಹಗುರಾಗಿ ನೀನು
ತೋರುವೆ ಎನ್ನಯ ಪೌರುಷ ಈಗಲೆ
ಎನ್ನುತ ಕಸಿದನು ಬಿಲ್ಲನು ಥಟ್ಟನೆ
ಹೆದೆಯನು ಏರಿಸಿ ಬಾಣವ ಹೂಡಿದ || ೩೭೮ ||

ಭಾರ್ಗವ ರಾಮನೆ ಸಿದ್ಧವು ಬಾಣವು
ಹೀರಲು ನಿನ್ನಯ ಜೀವವ ಈಗಲೆ
ಇರುತಿಹೆ ಋಷಿಯು ಬ್ರಾಹ್ಮಣವರನು
ಕೌಶಿಕ ಗುರುಗಳ ಅಕ್ಕನ ಮೊಮ್ಮಗ || ೩೭೯ ||

ಇರುವದು ಗೌರವ ಈ ಪರಿಯಿಂದಲಿ
ಕೊಲ್ಲಲು ಇಚ್ಛಿಸೆ ಈಗಲೆ ನಾನು
ವೈಷ್ಣವ ಅಸ್ತ್ರವು ವಿಫಲವು ಆಗದು
ಕುಂಠಿಸಬಹುದೇ ಚಲಿಸುವ ಶಕ್ತಿಯು || ೩೮೦ ||

ನಶಿಸಬಹುದೇ ತಪಸ್ವಿನ ಶಕ್ತಿಯು
ಹೇಳಿರಿ ಈಗಲೆ ಬಾಣಕೆ ಬಲಿಯನು
ಕೇಳುತ ಎಲ್ಲವ ಭಾರ್ಗವ ತಿಳಿದನು
ರಾಮನು ಇರುವನು ವೈಷ್ಣವರೂಪನು || ೩೮೧ ||

ಅಂದನು ಅವನಿಗೆ ಘಾತಿಸು ತಪವನು
ಕೂಡಲೆ ಭಾರ್ಗವ ಶಕ್ತಿಯು ಅಡಗಿತು
ಸೇರಿತು ರಾಮನ ದೇಹದಿ ಆಗಲೆ
ಹೊರಟನು ಭಾರ್ಗವ ಮನೋವೇಗದಲಿ || ೩೮೨ ||

ಹರಿಯಿತು ಕತ್ತಲೆ ಬೆಳಕದು ಮೂಡಿತು
ಬಿಟ್ಟರು ಎಲ್ಲರು ಸಂತಸದುಸಿರನು
ರಾಮನು ಕೊಟ್ಟನು ವೈಷ್ಣವ ಧನುವನು
ವರುಣನ ಕೈಯಲಿ ಕಾಯುತ ಇಡಲು || ೩೮೩ ||

ಅಯೋಧ್ಯೆ ಜನತೆಯು ಸ್ವಾಗತ ಕೋರಿತು
ಬಂದಿತು ನಿಬ್ಬಣ ಸಂಭ್ರಮದಿಂದಲಿ
ನಡೆಯಿತು ಸಂಭ್ರಮ ತಿಂಗಳು ತಿಂಗಳು
ರಾಮನ ಕೀರ್ತಿಯು ಬೆಳೆಯಿತು ಸುತ್ತಲು || ೩೮೪ ||

ಕೇಕಯ ರಾಜನು ಭರತನ ಅಜ್ಜನು
ಪ್ರೀತಿಯು ಅವನಿಗೆ ಭರತನ ಮೇಲೆ
ಕರೆಸಿದ ಅವನನು ತನ್ನಯ ರಾಜ್ಯಕೆ
ಜೊತೆಗೇ ಹೊರಟನು ಶತ್ರುಘ್ನ ಕೂಡ || ೩೮೫ ||

— ಬಾಲಕಾಂಡ ಸಂಪೂರ್ಣ —

# ಅಯೋಧ್ಯಾಕಾಂಡ

## (ಪೂರ್ವಾರ್ಧ)

ಭರತನು ಹೋದನು ಶತ್ರುಘ್ನ ಸಹಿತ
ಸೋದರಮಾವನು ಯುಧಾಜಿತ ಸಹಿತ
ಉಳಿದರು ಇಬ್ಬರು ಕೇಕಯ ರಾಜ್ಯದಿ
ಸಂತಸಪಟ್ಟನು ಅಜ್ಜನು ಅಲ್ಲಿಯೆ || ೧ ||

### ೧. ಅಯೋಧ್ಯೆಯಲ್ಲಿ ಶ್ರೀರಾಮ

ರಾಮನು ಉಳಿದನು ಲಕ್ಷ್ಮಣನೊಂದಿಗೆ
ಸೀತೆಯು ಉರ್ಮಿಳೆ ಸುಂದರ ಸದ್ಗುಣಿ
ರಾಮನು ಭಾರ್ಗವ ಗೆದ್ದಿಹ ಸುದ್ದಿಯು
ಹಬ್ಬಿತು ರಾಜ್ಯದಿ ಜೊತೆಗೇ ಕೀರ್ತಿಯು || ೨ ||

ರಾಮನು ಆದನು ಎಲ್ಲರ ಕಣ್ಮಣಿ
ತಂದೆಗೆ ತಾಯಿಗೆ ಆದನು ಜೀವನು
ಎಲ್ಲರು ತಿಳಿದರು ರಾಮನು ದೇವನು
ಬಂದಿಹ ಭೂಮಿಗೆ ಕರುಣೆಯ ತೋರಲು || ೩ ||

ರಾಮನು ವೀರನು ಶೂರನು ಅಲ್ಲದೆ
ಇದ್ದನು ಸುಂದರ ಸದ್ಗುಣಗಳ ಖಣಿ
ದಾನವ ಮಾಡದ ದಿನವೇ ಇಲ್ಲವು
ಸಜ್ಜನ ಸಂಗವು ಅವನಿಗೆ ದಿನಚರಿ ॥ ೪ ॥

ಆದರ ಗೌರವ ಗುರುಹಿರಿಯರಲ್ಲಿ
ಕರುಣೆಯು ತುಂಬಿದೆ ಸೇವಕ ಜನರಲಿ
ಶಾಸ್ತ್ರದಿ ಪಂಡಿತ ವೇದದಿ ಪರಿಣತ
ಸಿಟ್ಟನು ಗೆದ್ದಿಹ ದೀನರ ಬಂಧುವು ॥ ೫ ॥

ಶಸ್ತ್ರವು ಅಸ್ತ್ರವು ಆದವು ಕರಗತ
ಕಷ್ಟಸುಖಗಳನು ತಿಳಿಯುತ ಸರಿಸಮ
ಸತ್ಯಕೆ ಮುಡಿಪದು ಆತನ ಜೀವನ
ಕೊಟ್ಟಿಹ ವಚನವ ಮುರಿಯನು ಎಂದಿಗು ॥ ೬ ॥

ಬಿಟ್ಟಿಹ ಬಾಣವು ಆಗದು ವಿಫಲವು
ಮೆಟ್ಟಿದ ಕಾಮವ ಲೋಭವ ಅವನು
ಧರ್ಮವು ಅವನಿಗೆ ಜೀವನ ತಿರುಳು
ಧರ್ಮದ ಕಾರ್ಯವ ತಡೆಯರು ಯಾರೂ ॥ ೭ ॥

ಸೀತೆಯು ಲಕ್ಷ್ಮಣ ಜೀವರು ಅವನಿಗೆ
ಪ್ರಾಣವು ಒಂದೇ ದೇಹವು ಬೇರೆ
ವಿನಯದ ಮೂರ್ತಿಯು ಪ್ರತಿಭಾಶಾಲಿಯು
ನೆನಪಿನ ಶಕ್ತಿಯು ಅದ್ಭುತವಿದ್ದಿತು ॥ ೮ ॥

ತೋರನು ಹೊರಗಡೆ ಸುಖವನು ದುಃಖವ
ದುಷ್ಟರ ದಂಡನೆ ಮೊದಲನೆ ಕೆಲಸವು
ಶಿಷ್ಟರ ಪೋಷಣೆ ಜೀವದ ಕಾರ್ಯವು
ಕಲೆಗಳು ಅವನಿಗೆ ಕರಗತವಾಗಿವೆ || ೯ ||

ಯುದ್ಧದ ಶಾಸ್ತ್ರವ ಬಲ್ಲನು ಎಲ್ಲವ
ಹೆದರುತಲಿದ್ದರು ಅತಿರಥ ವೀರರು
ಮತ್ಸರ ಮೋಹವು ಸುಳಿಯವು ಅವನಲಿ
ಸಹನೆಯ ಬುದ್ಧಿಯ ಮೂರ್ತಿಯು ರಾಮನು || ೧೦ ||

ರಾಜ್ಯದ ಜನತೆಯ ದೃಷ್ಟಿಯು ಎಲ್ಲವು
ತಿರುಗಿತು ಆಗಲೆ ರಾಮನ ಕಡೆಗೆ
ನೋಡುತ ಎಲ್ಲವ ದಶರಥರಾಜನು
ಸಂತಸಬಟ್ಟನು ಹಿಗ್ಗುತ ಮನದಲಿ || ೧೧ ||

## ೨. ದಶರಥರಾಜನ ಮಂತ್ರಾಲೋಚನೆ

ಆಗಲೆ ಬಂದಿತು ಯೋಜನೆಯೊಂದು
ಆಗಿಹೆ ನಾನೂ ಮುದುಕನು ಇಂದು
ರಾಮನು ಆದರೆ ಯುವರಾಜನೆಂದು
ಪಡೆಯುವೆ ನಿಶ್ಚಿತ ವಿರಾಮ ನಾನು || ೧೨ ||

ಕರೆಸಿದ ದಶರಥ ಸಾಮಂತ ರಾಜರ
ಹಿರಿಯರು ಪೌರರ ದೇಶದ ಮುಖ್ಯರ
ಸಭೆಯಲಿ ತಿಳಿಸಿದ ಎಲ್ಲರ ಎದುರಿಗೆ
ಮನಸಿನ ಬಯಕೆಯ ರಾಮನ ಬಗೆಗೆ || ೧೩ ||

ಕಳೆದವು ವರ್ಷಗಳರವತ್ತು ಸಾವಿರ
ಆಗಿಹೆ ಮುದುಕನು ಬೇಕಿದೆ ವಿಶ್ರಮ
ರಾಮನು ಇರುವನು ಯೋಗ್ಯನು ಎಲ್ಲಕು
ಮಾಡಿರಿ ಅವನನು ಯುವರಾಜನಾಗಿ ॥ ೧೪ ॥

ಇಚ್ಛೆಯು ಇದ್ದರೆ ಒಪ್ಪಿರಿ ಇದಕೆ
ಇಲ್ಲದೆ ಇದ್ದರೆ ತಿಳಿಸಿರಿ ಬೇರೆಯೆ
ನಿಮ್ಮಯ ಇಚ್ಛೆಯೆ ಎನ್ನಯ ಇಚ್ಛೆಯು
ನಡೆಯುವೆ ಹಾಗೆಯೆ ತಿಳಿಸಿರಿ ಎಲ್ಲರು ॥ ೧೫ ॥

ಕೇಳುತ ದಶರಥ ನುಡಿಯನು ಎಲ್ಲರು
ಸಂತಸದಿಂದಲಿ ಕುಣಿದರು ಸಕಲರು
ಮಾತಿದು ಸುಂದರ ಯೋಗ್ಯವು ದೊರೆಯೆ
ರಾಮಗೆ ಪಟ್ಟವ ಕಟ್ಟಿರಿ ಕೂಡಲೆ ॥ ೧೬ ॥

ಅಂತಹ ಗುಣನಿಧಿ ಸಿಗುವದು ದುರ್ಲಭ
ಭಾಗ್ಯವು ಎಮ್ಮದು ನಿಜವದು ದೊರೆಯೆ
ರಾಮನ ರಕ್ಷೆಯು ಸಿಗುವದು ಎಮಗೆ
ಶುಭವದು ಆಗಲಿ ರಾಮಗೆ ನಿಮಗೆ ॥ ೧೭ ॥

### ೩. ಯುವರಾಜ ಪಟ್ಟಾಭಿಷೇಕದ ಸಿದ್ಧತೆ

ಎನ್ನುತ ಎಲ್ಲರು ಒಪ್ಪಿಗೆ ಇತ್ತರು
ಕರೆಸಿದ ವಶಿಷ್ಠ ವಾಮದೇವರನು
ತಿಳಿಸುತ ವಿಷಯವನೆಲ್ಲವ ಅವರಿಗೆ
ಇರುತಿಹ ಚೈತ್ರದಿ ಕಾರ್ಯವು ಜರುಗಲಿ ॥ ೧೮ ॥

ಗುರುಗಳೆ ಸಿದ್ಧತೆ ಮಾಡಿರಿ ಈಗಲೆ
ತಿಳಿಸಿರಿ ಏನದು ಬೇಕಿದೆ ಹೇಳಿರಿ
ಎನ್ನಲು ಆಗಲೆ ತಿಳಿಸಿದರಿಂತೆನೆ
ಬೇಕಿವೆ ಸುವರ್ಣ ರತ್ನಾದಿಗಳು || ೧೯ ||

ಪೂಜಾದ್ರವ್ಯವು ಧಾನ್ಯಮೂಲಿಕೆಯು
ಶುಭ್ರದ ಹೂವಿನ ಮಾಲೆಗಳಲ್ಲದೆ
ಅರಳು ತುಪ್ಪ ರಥ ಜೇನು ಶಸ್ತ್ರಾಸ್ತ್ರ
ಶುಭಲಕ್ಷಣಯುತ ಗಜವೂ ಬೇಕು || ೨೦ ||

ಚತುರಂಗಬಲ ಬಿಳಿಚಾಮರ ಬೇಕು
ಬೀಸಣಿಕೆ ಧ್ವಜ ಶ್ವೇತಛತ್ರವು
ಚಿನ್ನದ ಕಲಶವು ನೂರೊಂದು ಬೇಕು
ಹುಲಿಚರ್ಮ ಸುವರ್ಣಕೊಂಬಿನ ಹೋರಿ || ೨೧ ||

ಶಾಂತಿಯ ಕಾರ್ಯವು ನಡೆಯಲಿ ನಾಳೆಗೆ
ಸಿದ್ಧತೆಯಾಗಲಿ ಯಾಗದ ತಾಣದಿ
ಗಂಧ ಪುಷ್ಪ ತಾಂಬೂಲವ ಇರಿಸಿರಿ
ಹಬ್ಬಲಿ ಎಲ್ಲೆಡೆ ಸುಗಂಧ ಧೂಮ್ರವು || ೨೨ ||

ಶತಸಹಸ್ರ ದ್ವಿಜವರರನು ಕರೆಸಿರಿ
ನಾಳಿನ ಬೆಳಗಿಗೆ ಸ್ವಸ್ತಿವಾಚನವು
ನಡೆಯಲಿ ಎಲ್ಲೆಡೆ ಸಂತರ್ಪಣೆಯು
ಧ್ವಜಪಟ ಏರಲಿ ಮನೆಮನೆಗಳಲಿ || ೨೩ ||

ದೇವಸ್ಥಾನದಿ ನಡೆಯಲಿ ಪೂಜೆಯು
ಸುಭಟರು ನಿಲ್ಲಲಿ ಕತ್ತಿಯ ಹಿರಿದು
ಕೇಳುತ ಎಲ್ಲವ ದಶರಥ ರಾಜನು
ಅಪ್ಪಣೆ ಕೊಟ್ಟನು ಸಿದ್ಧತೆ ಮಾಡಲು ॥ ೨೪ ॥

ದಶರಥ ಕರೆಸಿದ ರಾಮನ ಅಲ್ಲಿಗೆ
ರಾಮನು ಮಣಿದನು ತಂದೆಯ ಪಾದಕೆ
ಅಪ್ಪಿತ ಮಗನನು ಹೇಳಿದ ಕೂಡಲು
ಸುವರ್ಣಪೀಠದಿ ತನ್ನಯ ಬದಿಗೆ ॥ ೨೫ ॥

ಎಲ್ಲರು ನಿಶ್ಚಯ ಮಾಡಿದರಿಂದು
ನಿನ್ನನು ಯುವರಾಜ ಪಟ್ಟಕೆ ತರಲು
ನಾಳೆಯೆ ಇರುವದು ಪುಷ್ಯಾನಕ್ಷತ್ರ
ವಹಿಸುತ ಪಟ್ಟವ ರಾಜ್ಯವ ಆಳು ॥ ೨೬ ॥

## ೪. ರಾಮನಿಗೆ ದಶರಥನ ಉಪದೇಶ

ತಿಳಿದಿಹೆ ಎಲ್ಲವ ಧರ್ಮಸೂಕ್ಷ್ಮವನು
ಆದರು ಹೇಳುವೆ ಈಗಿನ ಸಮಯದಿ
ವಿನಯದಿ ನಡೆಯುತ ಇಂದ್ರಿಯ ಗೆಲ್ಲು
ಕಾಮಕ್ರೋಧವ ಮೆಟ್ಟುತ ನಿಲ್ಲು ॥ ೨೭ ॥

ತಿಳಿದಿರು ರಾಜರ ದೋಷವ ಏಳು
ಹೆಣ್ಣಿನ ಜೂಜಿನ ಬೇಟೆಯ ಮದ್ಯದ
ಮಾತಿನ ಪೌರುಷ ಉಗ್ರದ ದಂಡನೆ
ಹಣವನು ಸೆಳೆಯುವ ದೋಷಗಳೇಳು ॥ ೨೮ ॥

ಇವುಗಳ ಹೊಂದದೆ ರಾಜ್ಯವ ಆಳು
ಚಾರರ ಮೂಲಕ ತಿಳಿದಿರು ಎಲ್ಲವ
ಧಾನ್ಯದ ಕಣಜವು ಆಯುಧಶಾಲೆಯು
ಬತ್ತದೆ ಇರುವದು ಮುಖ್ಯವು ರಾಜ್ಯಕೆ || ೨೯ ||

ರಾಜ್ಯಕೆ ದುಡ್ಡಿನ ಕೊರತೆಯು ಬಾರದೆ
ಸಚಿವರ ಜನತೆಯು ಸಂತಸ ಕೆಡಿಸದೆ
ಸ್ವಂತದ ಚಿಂತೆಯು ಮಾಡದೆ ರಾಮನೆ
ಜನತೆಯ ಹೃದಯವ ತುಂಬಿರು ನೀನು || ೩೦ ||

ರಾಮನ ಸುದ್ದಿಯು ಹಬ್ಬಿತು ಎಲ್ಲೆಡೆ
ಮುಟ್ಟಿತು ಹಾಗೆಯೆ ಕೌಸಲ್ಯೆಗೆ ಇದು
ಸಂತಸದಿಂದಲಿ ಕೊಟ್ಟಳು ರತ್ನವ
ಸುದ್ದಿಯ ತಂದಿಹ ಸೇವಕ ಜನರಿಗೆ || ೩೧ ||

ದಶರಥ ಬರುತಲಿ ಅರಮನೆಯೊಳಗೆ
ಕರೆಸಿದ ರಾಮನ ಕೂಡಲೆ ಅಲ್ಲಿಗೆ
ಹೇಳಿದ ಕುವರನೆ ನಾಳೆಯೆ ನಿನಗೆ
ಪಟ್ಟವ ಕಟ್ಟುವೆ ಯುವರಾಜನಮ || ೩೨ ||

ಕೆಲದಿನದಿಂದಲಿ ಕಾಣುವೆ ನಾನು
ಮಂಗಲವಲ್ಲದ ಭೀಕರ ಕನಸನು
ಸಿಡಿಲಿದು ಬೀಳುತ ಮೋಡವು ಇಲ್ಲದೆ
ಮುತ್ತಿವೆ ಜನ್ಮವ ರವಿಕುಜರಾಹು || ೩೩ ||

ಲಕ್ಷ್ಮಣವಿದುವೇ ರಾಜಗೆ ಕೆಡಕು
ಮರಣವು ರಾಜಗೆ ಎನ್ನುತಲಿರುವರು
ಕೇಳುತ ಎಲ್ಲವ ಅಳುಕಿದೆ ಮನವು
ಪಟ್ಟವ ಕಟ್ಟುತ ಪಡೆಯುವೆ ಶಾಂತಿಯ ॥ ೩೪ ॥

ಇಂದಿನ ವರೆಗೂ ಆಳಿದೆ ರಾಜ್ಯವ
ತೀರಿವೆ ಎನ್ನಯ ಪಂಚಋಣಗಳು
ದೇವ, ದ್ವಿಜ, ಋಷಿ, ಪಿತೃ, ಆತ್ಮ ಋಣ
ತೀರಿಸಿ ಎಲ್ಲವ ತೃಪ್ತನು ಆಗಿಹೆ ॥ ೩೫ ॥

ಇರುವದು ಒಂದೇ ನಿನ್ನಯ ಪಟ್ಟವು
ಮಾಡಿದೆನೆಂದರೆ ಮುಗಿಯಿತು ಕೆಲಸವು
ನಾಳೆಗೆ ಬರುವನು ಚಂದ್ರನು ಪುಷ್ಯಕೆ
ಇದುವೇ ಒಳ್ಳೆಯ ಗಳಿಗೆಯು ಎಂದರು ॥ ೩೬ ॥

ಇಂದಿನ ರಾತ್ರಿಯೆ ವ್ರತವನು ಹಿಡಿಯುತ
ಪತ್ನಿಯ ಸಹಿತದಿ ಉಪವಾಸವಿರುತ
ದರ್ಭೆಯ ಮೇಲೆಯೆ ಮಲಗಿರಿ ನೀವು
ಕಾಯುತಲಿರಲಿ ಗೆಳೆಯರು ನಿನ್ನನು ॥ ೩೭ ॥

ನಿನ್ನಯ ತಮ್ಮನು ಭರತನು ಹೋಗಿಹ
ಸಮಯವು ಇದುವೇ ಯೋಗ್ಯವು ನಿಜಕೂ
ಭರತನು ಇರುವನು ಸಜ್ಜನ ವಿಧೇಯ
ಅಲ್ಲದೆ ಇರುವನು ಜಿತೇಂದ್ರಿಯ ಕೂಡ ॥ ೩೮ ॥

ಆದರು ಮನುಜನ ಮನಸದು ಚಂಚಲ
ಪಟ್ಟವು ಒಮ್ಮೆಯೆ ಮುಗಿಯಿತು ಎಂದಕೆ
ಉಳಿದವರೆಲ್ಲರು ಒಪ್ಪುವರಿದಕೆ
ಕೇಳುತ ಎಲ್ಲವ ರಾಮನು ನಡೆದನು || ೩೯ ||

೫. ಕೌಸಲ್ಯೆಯ ಅರಮನೆಯಲ್ಲಿ

ನೆಟ್ಟಗೆ ನಡೆದನು ತಾಯಿಯ ಭವನಕೆ
ದೇವರ ಎದುರಿಗೆ ಮೌನದಿ ಕುಳಿತಿಹ
ತಾಯಿಯ ನೋಡುತ ಮಣಿದನು ಪಾದಕೆ
ಆಗಲೆ ಬಂದರು ಸುಮಿತ್ರೆ ಲಕ್ಷ್ಮಣ || ೪೦ ||

ಸೀತೆಯು ಕೂಡಾ ಅಲ್ಲಿಯೆ ಇದ್ದಳು
ರಾಮನು ತಿಳಿಸಿದ ತಂದೆಯ ಆಣತಿ
ಅಂದಿನ ರಾತ್ರಿಯೆ ವ್ರತವನು ಹಿಡಿಯುವ
ಕೇಳುತ ಎಲ್ಲವ ಕಣ್ಗಳು ತುಂಬಿರೆ || ೪೧ ||

ಮಗುವೇ ರಾಮನೆ ಚಿರಂಜೀವಿಯೋ
ಎನ್ನಯ ಕಂಟಕ ಕಳೆದವು ಎಲ್ಲವು
ಸುಮಿತ್ರೆಯ ಜನರು ಎಮ್ಮಯ ಜನರು
ಸಂತಸಪಡುತಲಿ ನಲಿಯಲಿ ಎಲ್ಲರು || ೪೨ ||

ರಾಮನು ನಮಿಸಿದ ತಾಯಿಯರಿಬ್ಬರ
ಅಂದನು ನೋಡುತ ಲಕ್ಷ್ಮಣನೆಡೆಗೆ
ಎನ್ನಯ ಪಟ್ಟವು ನಿನ್ನದು ಕೂಡಾ
ಆಳುವೆವಿಬ್ಬರು ತಿಳಿದಿರು ನೋಡಾ || ೪೩ ||

## ೬. ರಾಮನ ಅರಮನೆಯಲ್ಲಿ

ನಡೆದನು ಭವನಕೆ ಸೀತೆಯ ಜೊತೆಗೆ
ಬಂದರು ಅಲ್ಲಿಗೆ ವಸಿಷ್ಠ ಋಷಿಗಳು
ರಾಮನು ಕರೆದನು ಸ್ವಾಗತಕೋರುತ
ತಿಳಿಸಿದರಾಗಲೆ ಅಂದಿನ ಕಾರ್ಯವ ॥ ೪೪ ॥

ವ್ರತಸಂಕಲ್ಪವ ಮಾಡಿದ ರಾಮನು
ಹೇಳುತ ಅವನಿಗೆ ಉಪವಾಸವಿರಲು
ನೋಡುತ ಸಂಭ್ರಮ ಎಲ್ಲೆಡೆ ಅವರು
ಹೋದರು ಗುರುಗಳು ತಮ್ಮಯ ಮನೆಗೆ ॥ ೪೫ ॥

ರಾಮ ಸೀತೆಯರು ಮಾಡುತ ಸ್ನಾನವ
ಪೂಜೆಯಗೈದರು ಹೋಮವ ಮಾಡುತ
ಮೌನದ ವ್ರತವನು ಹಿಡಿಯುತ ಅವರು
ಮಲಗಿದರಾದಿನ ದರ್ಭೆಯ ಮೇಲೆಯೆ ॥ ೪೬ ॥

ಬೆಳಗಿನ ಸಮಯದಿ ತುಂಬಿತು ಊರನು
ವೇದದ ಘೋಷವು ರಾಮನ ಸುದ್ದಿಯು
ಪಟ್ಟಣ ಬೆಳಗಿತು ಸಡಗರ ತುಂಬುತ
ಕಂಡರು ಎಲ್ಲೆಡೆ ಗುಂಪು ಗುಂಪು ಜನ ॥ ೪೭ ॥

ಎಲ್ಲರ ಬಾಯಲಿ ರಾಮನ ಸುದ್ದಿಯೆ
ಪಟ್ಟದ ಸಂತಸ ತುಂಬಿದೆ ಎಲ್ಲೆಡೆ
ಏರಿದೆ ಧ್ವಜಪಟ ಮನೆಮನೆಗಳಲಿ
ತುಂಬಿದೆ ಹರ್ಷವು ಬೀದಿಬೀದಿಯಲಿ ॥ ೪೮ ॥

## ೨. ಮಂಥರೆಯ ಉಪದೇಶ

ಇದ್ದರು ಎಲ್ಲರು ಸಂಭ್ರಮದಿಂದಲಿ
ಇದ್ದಳು ಒಬ್ಬಳು ಮಂಥರೆಯೆಂದು
ದಾಸಿಯು ಆಕೆಯು ಕೈಕೆಯಿ ರಾಣಿಗೆ
ಇದ್ದಿತು ಗೂನಿನ ಬೆನ್ನದು ಅವಳಿಗೆ || ೪೯ ||

ನೋಡುತ ಜನರಲಿ ತುಂಬಿದ ಸಂಭ್ರಮ
ಕೇಳಿದಳಾಗಲೆ ಬೇರೆಯ ದಾಸಿಯ
ಏನಿದು ಹಬ್ಬವು ಊರಿನ ತುಂಬಾ
ರಾಮನ ತಾಯಿಯದೇನದು ಜಂಬಾ || ೫೦ ||

ಇರುವಳು ಗೊತ್ತಿದೆ ಬಲು ಬಲು ಜಿಪುಣಿ
ಮಾಡುವಳಿಂದದು ಅಗಣಿತ ದಾನವ
ದಾಸಿಯು ಅಂದಳು ತಿಳಿಯದೆ ನಿನಗೆ
ನಾಳೆಯ ಬೆಳಗಿಗೆ ರಾಮನ ಪಟ್ಟವು || ೫೧ ||

ಕೇಳುತ ಸುದ್ದಿಯ ರಾಮನ ಪಟ್ಟದ
ಉರಿಯಿತು ಮನವದು ಸಿಟ್ಟಿನ ಭರದಲಿ
ನೆಟ್ಟಗೆ ಹೋದಳು ಕೈಕೆಯಿ ಬಳಿಯಲಿ
ಹೋಗುತ ಸಿಟ್ಟಲಿ ಕೇಳಿದಳವಳಿಗೆ || ೫೨ ||

ಏನಿದು ಮಲಗಿಹೆ ರಾಣಿಯೆ ಇನ್ನೂ
ಮುತ್ತಿದೆ ಎಲ್ಲೆಡೆ ಸಂಕಟವಿಂದೂ
ಅನ್ನುತಲಿದ್ದೆಯೆ ಗಂಡನು ನಿನ್ನವ
ತಿಳಿ ನೀ ಮೂಢಳೆ ಸುಳ್ಳದು ಎಂದು || ೫೩ ||

ಏನಿದು ಮಂಥರೆ ಆಗಿದೆ ಏನದು
ಏಕಿದು ಸಂಕಟ ಕಾದಿದೆ ಯಾವುದು
ಎನ್ನಲು ಮಂಥರೆ ಅಂದಳು ಆಗಲೆ
ದೇವಿಯೆ ಭಾರಿಯ ಸಂಚದು ನಡೆದಿದೆ ॥ ೩೪ ॥

ದಶರಥ ರಾಜನು ಪಟ್ಟವ ಕಟ್ಟುವ
ರಾಮನಿಗೆನ್ನುತ ಸುದ್ದಿಯು ಹರಡಿದೆ
ಬಂದಿತು ನಿನಗೂ ಇಳಿತರ ಕಾಲವು
ಇರುವದು ನಂತರ ದಾಸಿಯ ತೆರದಿ ॥ ೩೫ ॥

ಕೇಳುತ ಸುದ್ದಿಯ ಅರಳಿತು ಮುಖವು
ಕೈಕೆಯು ಅಂದಳು ಎಂತಹ ಸುದ್ದಿಯು
ರಾಮನು ಭರತನು ಬೇರೆಯೆ ಎನಗೆ
ಸದ್ಗುಣಿ ರಾಮನು ರಾಜನು ಆಗಲಿ ॥ ೩೬ ॥

ಒಳ್ಳೆಯ ಸುದ್ದಿಯ ತಂದಿಹ ನಿನಗೆ
ಕೊಡುವೆನು ರತ್ನದ ಹಾರವ ಈಗಲೆ
ನಿನ್ನಯ ಬಾಯಿಗೆ ಸಕ್ಕರೆ ಹಾಕುವೆ
ಎನ್ನುತ ಕೊಟ್ಟಳು ರತ್ನದ ಹಾರವ ॥ ೩೭ ॥

ಮಂಥರೆ ಎಸೆದಳು ರತ್ನದ ಹಾರವ
ಬುದ್ಧಿಯು ಇದೆಯೆ ಮೂರ್ಖಳೆ ನಿನಗೆ
ಸಂಕಟ ತಿಳಿಯದೆ ಬರುತಿಹ ಘೋರವ
ಬರುವದು ತಿಳಿವುದು ಬುದ್ಧಿಯ ಲಕ್ಷಣ ॥ ೩೮ ॥

ಸವತಿಯ ಕುವರನು ನಿನ್ನಯ ಮಗನೇ
ಸವತಿಯು ಎಂದಿಗು ಅಕ್ಕನು ಅಹುದೇ
ರಾಜನ ಪ್ರಾತೆಯು ಆಗಲು ಅವಳು
ತುಳಿವಳು ನಿನ್ನನು ದಾಸಿಯ ಸ್ಥಳಕೆ || ೫೯ ||

ರಾಮನು ಇರುವನು ಶೂರನು ಸದ್ಗುಣಿ
ಅದಕೇ ಎಲ್ಲರ ಬೆಂಬಲ ಅವನಿಗೆ
ಅಲ್ಲದೆ ಇರುವನು ಲಕ್ಷ್ಮಣ ಜೊತೆಗೆ
ನಿನ್ನಯ ಭರತಗೆ ಪರಟಿಯೆ ಕೊನೆಗೆ || ೬೦ ||

ಕಳಿಸಿಹೆ ಭರತನ ನಿನ್ನಯ ತವರಿಗೆ
ಬೆಳೆಯುತ ಅಲ್ಲಿಯೆ ಬಾರನು ಇಲ್ಲಿಗೆ
ನೆನೆಯರು ಯಾರೂ ಅವನನು ಇಲ್ಲಿಯೆ
ಜೊತೆಯಲಿ ಹೋಗಿಹ ಶತ್ರುಘ್ನನು ಸಹ || ೬೧ ||

ನಿನ್ನಯ ಗಂಡನು ಧೂರ್ತನು ಇರುವನು
ಕಳಿಸಿಹ ನಿನ್ನಯ ಮಗನನು ದೂರಕೆ
ಕಟ್ಟುತಲಿರುವನು ಪಟ್ಟವ ರಾಮಗೆ
ನಂತರ ಯೋಚಿಸು ಭರತನ ಗತಿಯನು || ೬೨ ||

ರಾಜಪರಂಪರೆ ಹೋಗುತ ರಾಮಗೆ
ರಾಮನ ಮಕ್ಕಳೆ ಆಗುತ ರಾಜರು
ನಿನ್ನಯ ಸಂತತಿ ಆಗುತ ದಾಸರು
ಕಳೆಯುವೆ ಜೀವನ ಭಿಕ್ಷುಕಿ ರೂಪದಿ || ೬೩ ||

ಸವತಿಯು ಬಿಡುವಳೆ ನಿನ್ನನು ಹೀಗೆಯೆ
ಅವಳಿಗೆ ಕಷ್ಟವ ಕೊಟ್ಟಿಹ ನಿನ್ನನು
ಸುಮ್ಮನೆ ಕೂಡಲು ಮೂರ್ಖಳೆ ಅವಳು
ರಾಮನ ಎದುರಿಗೆ ನಿಲ್ಲುವರಾರು ॥ ೬೪ ॥

ಸವತಿಯ ಮಗನಿಗೆ ರಾಜ್ಯವು ಸಿಕ್ಕರೆ
ರತ್ನದ ಹಾರವ ಕೊಡುತಿಹೆ ನೀನು
ಮೂರ್ಖಳೊ ಮೂಢಳೊ ಹುಚ್ಚಳೊ ಹೇಳು
ತಿಳಿಯದು ಎಷ್ಟೊ ಘೋರ ಸಂಕಟವು ॥ ೬೫ ॥

## ೮. ಕೈಕೇಯಿರಾಣಿಯ ಪ್ರತಿಕ್ರಿಯೆ

ಮೊಳೆಯಿತು ಬೀಜವು ಬೆಳೆಯಿತು ವಿಷವು
ಕೈಕೆಯ ಮನಸದು ಕಲುಷಿತವಾಯಿತು
ಅಂದಳು ಆಗಲೆ ಮಂಥರೆ ನಿಜವು
ರಾಮನು ಇದ್ದರೆ ಭರತಗೆ ಕಷ್ಟವು ॥ ೬೬ ॥

ಅಟ್ಟುವೆ ಅವನನು ಕಾಡಿಗೆ ನಾನು
ತಿಳಿಸದು ಈಗಲೆ ಮಾಡುವದೇನು
ಮೊಳಕೆಯ ಚಿವುಟುತ ಬೆಳೆಯುವ ಮೊದಲೇ
ಅಟ್ಟುವೆ ರಾಮನ ಪಟ್ಟದ ಮೊದಲೇ ॥ ೬೭ ॥

## ೯. ಮಂಥರೆಯ ಮಾರ್ಗದರ್ಶನ

ಮಂಥರೆ ಅಂದಳು ರಾಣಿಯೆ ಏನಿದು
ಮರೆತಿಹೆಯಲ್ಲವೆ ನಿನ್ನಯ ವರಗಳ
ನೆನೆ ನೀ ಕೂಡಲೆ ಬಂದಿದೆ ಸಮಯವು
ಹಿಂದಕೆ ನಿನ್ನಯ ಗಂಡನು ಹೋಗುತ ॥ ೬೮ ॥

ಇಂದ್ರಗೆ ಕೊಟ್ಟನು ಯುದ್ಧದಿ ಬೆಂಬಲ
ನಡೆಯಿತು ಕದನವು ಸುರಾಸುರರಲಿ
ಶಂಬರ ದೈತ್ಯನ ಗೆದೆಯುವ ಸಮಯದಿ
ನಿನ್ನಯ ಗಂಡನು ಹೊಂದಿದ ಗಾಯವ ॥ ೬೯ ॥

ಮೂರ್ಛಿತನಾಗುತ ಬಿದ್ದನು ಕೆಳಗಡೆ
ಜೊತೆಯಲಿ ಇದ್ದಿಹ ನೀನೇ ಆಗಲೆ
ಒಯ್ಯುತ ಅವನನು ಬೇರೆಯ ಕಡೆಯಲಿ
ಉಳಿಸಿದೆ ಜೀವವ ನಿನ್ನಯ ಪತಿಯದು ॥ ೭೦ ॥

ಮೂರ್ಛೆಯ ನಂತರ ನಿನ್ನಯ ಗಂಡನು
ಆಗಲೆ ಕೊಟ್ಟನು ವರಗಳನೆರಡು
ಕೇಳದೆ ಅವುಗಳ ಇಟ್ಟಿಹೆ ಇನ್ನೂ
ಕೇಳದೆ ಈಗಲೆ ಮಾಡುವಿಯೇನು ॥ ೭೧ ॥

ಮೊದಲನೆ ವರದಲಿ ಭರತಗೆ ರಾಜ್ಯವು
ಎರಡನೆ ವರದಲಿ ರಾಮನ ಅಟ್ಟು
ಹೋಗಲಿ ಆತನು ರಾಜ್ಯವ ಬಿಟ್ಟು
ಕಳೆಯಲಿ ಹದಿನಾಲ್ಕು ವರುಷಗಳನು ॥ ೭೨ ॥

ಅಲ್ಲಿಯ ವರೆಗೂ ನಿನ್ನಯ ಮಗನು
ಪಡೆಯಲಿ ಜನರಲಿ ಪ್ರೀತಿಯ ಗೌರವ
ಕಳೆಯಲಿ ರಾಮನ ಆದರ ಗೌರವ
ಮರೆಯಲಿ ಜನತೆಯು ರಾಮನ ಇರವನು ॥ ೭೩ ॥

ನಾಚಿಕೆ ಹೆದರಿಕೆ ಬಿಡುತಲಿ ನೀನು
ಹೋಗುತ ಈಗಲೆ ಕೋಪದ ಗೃಹಕೆ
ಕಳಚುತ ಒಡವೆಯ ಬಿಚ್ಚುತ ಜಡೆಯನು
ಕರೆಯಿಸು ರಾಜನ ಕೋಪದ ಗೃಹಕೆ ॥ ೭೪ ॥

ನಿನ್ನಲಿ ಮೋಹವು ಇನ್ನೂ ಇರುವದು
ಜೀವವ ಕೊಟ್ಟರು ನಿನ್ನನು ಬಿಡನು
ಕೇಳುವ ಸಮಯದಿ ಕರುಣೆಯು ಬೇಡಾ
ಬೇರೆಯ ಆಶೆಯ ಒಪ್ಪಲು ಬೇಡಾ ॥ ೭೫ ॥

ಕಾರ್ಯವ ಸಾಧಿಸೆ ಕರುಣೆಯು ಕೂಡದು
ಗುರಿಯದು ಎದುರಿಗೆ ನಿಚ್ಚಳವಿರಲಿ
ಭರತನು ರಾಜನು ಆಗಲು ನೀನು
ಮಾಡುವದೆಲ್ಲವು ಸರಿ ತಿಳಿ ನೀನು ॥ ೭೬ ॥

ಕುಬ್ಜೆಯು ಮಂಥರೆ ತುಂಬಿದ ವಿಷವು
ಇಳಿಯಿತು ಕೈಕೆಯಿ ಮನದಲಿ ಕೂಡಲೆ
ಕಳಚುತ ಆಗಲೆ ಒಡವೆಗಳೆಲ್ಲವ
ಬಿದ್ದಳು ನೆಲದಲಿ ರೋಷದಿ ಉರಿಯುತ ॥ ೭೭ ॥

## ೯. ಕೈಕೆಯಿಯ ಬೇಡಿಕೆಯ ಬಲೆ

ಬಂದನು ಆಗಲೆ ದಶರಥರಾಜನು
ಅರಮನೆಗಲ್ಲದ ಅಂತಃಪುರಕೆ
ಕಾಣದೆ ನಲ್ಮೆಯ ಕೈಕೆಯಿ ರಾಣಿಯ
ಕೇಳಿದ ದಾಸಿಯ ರಾಣಿಯು ಎಲ್ಲಿ ॥ ೭೮ ॥

ತಿಳಿಯುತ ರಾಣಿಯು ಕೋಪದ ಸುದ್ದಿಯ
ಹೊರಟನು ರಾಜನು ಕೋಪದ ಗೃಹಕೆ
ಮುಪ್ಪಿನ ಮೋಹದಿ ಮುಚ್ಚಿಡ ದಶರಥ.
ಏನಿದು ಭಾಮಿನಿ ಕೋಪವು ಏಕೆ ॥ ೭೯ ॥

ಕಾರಣವೇನದು ಹೇಳಲೆ ಸುಂದರಿ
ಕಾರಣವಾವುದು ತಿಳಿಸೆಲೆ ಮೋಹಿನಿ
ಕೂಡಲೆ ಮಾಡುವೆ ಶಾಸ್ತಿಯು ಅವರಿಗೆ
ಬೇಡಿದುದೆಲ್ಲವ ಕೊಡುವೆನು ನಿನಗೆ ॥ ೮೦ ॥

ಅಂದಳು ಕೈಕೆಯಿ ರಾಜನೆ ಕೇಳು
ಕಾರಣ ಕೋಪಕೆ ಯಾರೂ ಇಲ್ಲವು
ಇದ್ದುದು ಹೇಳುವೆ ನೀನೇ ಕಾರಣ
ಆಣೆಯ ಮಾಡುತ ನೀಡುವೆಯಾ ನೀ ॥ ೮೧ ॥

ದಶರಥನಾದನು ಕೌತುಕಭರಿತನು
ಏನಿದು ನಾನೇ ಕಾರಣ ಕೋಪಕೆ
ಅಂತಹದೇನನು ಮಾಡಿಹೆ ನಾನು
ತಿಳಿಯದು ನಿಜಕೂ ಲೇಶವು ಕೂಡಾ ॥ ೮೨ ॥

ದೇವರ ಹೆಸರಲಿ ಆಣೆಯ ಮಾಡುತ
ಬೇಡುವೆ ಈಗಲೆ ಹೇಳೆಲೆ ಭಾಮಿನಿ
ಕೊಡುವೆನು ಬೇಡಿದುದೆಲ್ಲವ ಈಗಲೆ
ಕೈಕೆಯು ಅಂದಳು ದಿಟ್ಟಿಸಿ ನೋಡುತ ॥ ೮೩ ॥

ದೇವರ ಆಣೆಯು ಬೇಡದು ನನಗೆ
ಮಾಡುವದಾದರೆ ಬೇಕಿದೆ ತಿಳಿ ನೀ
ರಾಮನ ಆಣೆಯ ಮಾಡುತ ನೀನು
ತಪ್ಪದೆ ನಡೆಸುವ ವಚನವ ಕೊಡು ನೀ ॥ ೮೪ ॥

ನಡುಗಿತು ದಶರಥ ಮನವದು ಆಗಲೆ
ಆದರು ಅವನನು ಮುಚ್ಚಿತು ಮೋಹವು
ರಾಮನ ಜೀವವು ಎನ್ನಯ ಜೀವವು
ಆಗಲಿ ರಾಮನ ಆಣೆಯು ಹೇಳು ॥ ೮೫ ॥

ರಾಣಿಯು ಅಂದಳು ನೋಡುತ ದಿಟ್ಟಿಸಿ
ನಿನ್ನಯ ವಚನಕೆ ಸಾಕ್ಷಿಯು ದೇವರು
ಸ್ಮರಿಸಿಕೊ ಶಂಬರ ಯುದ್ಧವ ಮೊದಲು
ಯುದ್ಧದ ಮಧ್ಯದಿ ಶಂಬರ ಹೊಡೆತಕೆ ॥ ೮೬ ॥

ಉರುಳಿದೆ ರಾಜನೆ ಮೂರ್ಛೆಯ ತಳೆದು
ಯತ್ನವ ಮಾಡುತ ಉಳಿಸಿದೆ ನಿನ್ನನು
ಆಗಲೆ ಕೊಟ್ಟಿಹೆ ವರಗಳನೆರಡು
ಬಂದಿದೆ ಈಗಲೆ ಕೇಳುವ ಸಮಯವು ॥ ೮೭ ॥

ವಚನವ ಎಂದೂ ಮುರಿಯದ ರಾಜನೆ
ಕೇಳುವೆ ಎರಡೂ ವರಗಳನಿಂದು
ಪೂರ್ತಿಯ ಮಾಡುತ ಒದುಕಿಸು ಎನ್ನನು
ಇಲ್ಲದೆ ಹೋದರೆ ಮರಣವೆ ಕಾದಿದೆ ॥ ೮೮ ॥

ರಾಜನು ಇದ್ದನು ಕಾಮದ ಮೂರ್ತಿಯು
ಮೋಹದಿ ಅದ್ದಿದ ಬುದ್ಧಿಯು ಕುರುಡು
ಅಂಜಿಕೆ ಏತಕೆ ಹೇಳಲಿ ರಾಣಿಯೇ
ವಚನವ ಮುರಿಯೆನು ಜೀವವು ಹೋದರು || ೮೯ ||

ರಾಜನೆ ಈಗಲೆ ವರವನು ಪಾಲಿಸು
ಮೊದಲನೆ ವರದಲಿ ಭರತಗೆ ಪಟ್ಟವು
ಎರಡನೆ ವರದಲಿ ರಾಮಗೆ ಕಾಡು
ಹೋಗಲಿ ಆತನು ರಾಜ್ಯವ ಬಿಡುತಲಿ || ೯೦ ||

ಕಳೆಯಲಿ ಕಾಡಲಿ ಹದಿನಾಲ್ಕುವರುಷ
ಕಳಚಲಿ ಇಲ್ಲಿಯೇ ರಾಜರ ವಸ್ತ್ರವ
ನಾರಿನ ಬಟ್ಟೆಯ ಧರಿಸಲಿ ಆತನು
ಚರ್ಮವ ಹೊದೆಯುತ ಜಟೆಯನು ಧರಿಸಲಿ || ೯೧ ||

ಇಂದಿನ ದಿನವೇ ರಾಮನು ಹೊರಡಲಿ
ಕಾಡನು ಸೇರಲಿ ಎಲ್ಲರ ಎದುರಲಿ
ಸ್ಮರಿಸುತ ನಿನ್ನಯ ವಂಶದ ಗೌರವ
ಪಾಲಿಸು ನಿನ್ನಯ ವಚನವ ತಪ್ಪದೆ || ೯೨ ||

ಕ್ಷಣದಲಿ ಕುಸಿದನು ದಶರಥರಾಜನು
ಏಕಿದು ಕೈಕೆಯಿ ಆಗಿದೆ ಏನದು
ಹೇಳಲಿ ರಾಮನು ಮಾಡಿದುದೇನದು
ನಿನ್ನಲಿ ರಾಮನ ಗೌರವ ತಿಳಿಯದೆ || ೯೩ ||

ರಾಮನು ಎನ್ನಯ ಜೀವದ ಉಸಿರಿಹ
ಹೋದರೆ ಕಾಡಿಗೆ ಎನ್ನನು ತೊರೆಯುತ
ಎನ್ನಯ ಜೀವವು ಉಳಿಯದು ತಿಳಿ ನೀ
ನಿನ್ನಯ ಬುದ್ಧಿಯು ಕೆಟ್ಟಿತು ಹೇಗೆ ॥ ೯೪ ॥

ಭರತನು ಕೂಡಾ ಧಾರ್ಮಿಕನಾಗಿಹ
ರಾಮನ ಸಂಗಡ ಸ್ನೇಹವು ಅವನದು
ರಾಮನು ಎಲ್ಲರ ಪ್ರೀತಿಗೆ ಪಾತ್ರನು
ಅಲ್ಲವೆ ಶುದ್ಧನು ಸಿದ್ಧನು ವೀರನು ॥ ೯೫ ॥

ರಾಜ್ಯದ ಜನತೆಗೆ ಜೀವನು ಅವನು
ಪಾದವ ಹಿಡಿಯುತ ಬೇಡುವೆ ನಿನ್ನನು
ತೊರೆಯುತ ವರಗಳ ಬೇಡಿಕೆ ನೀನು
ಕೇಳಲೆ ರಾಣಿಯೆ ಬೇರೆಯ ವರಗಳ ॥ ೯೬ ॥

ಉರಿಯುತ ರಾಣಿಯು ಅಂದಳು ರಾಜಗೆ
ಮಾತನು ಮುರಿಯುವ ಹೇಡಿಯು ನೀನಿಹೆ
ಆಗದ ವರಗಳ ಕೊಟ್ಟಿಹುದೇಕದು
ವಚನದ ಶೂರರ ಹೆಸರನು ಕೇಳು ॥ ೯೭ ॥

ತನ್ನಯ ಮಾಂಸವ ಕೊಟ್ಟನು ಪಕ್ಷಿಗೆ
ಗೊತ್ತಿದೆ ಇಲ್ಲವೊ ರಾಜನು ಶಿಬಿವರ
ಅಲರ್ಕ ರಾಜನು ಕೊಟ್ಟನು ಕಣ್ಣನು
ಸಮುದ್ರರಾಜನು ವಚನವ ಮುರಿಯದೆ ॥ ೯೮ ॥

ನಿಂತಿಹ ಎಲ್ಲೆಯ ಮೀರದೆ ಅಲ್ಲಿಯೆ
ಬುದ್ಧಿಯ ಭ್ರಮೆಯದು ಆಗಿದೆ ನಿನಗೆ
ರಾಮಗೆ ಪಟ್ಟವ ಕಟ್ಟುತ ನೀನು
ಕೌಸಲ್ಯೆ ತೋಳಲಿ ಇರುವದು ಬೇಕಿದೆ ‖ ೯೯ ‖

ಪಾಲಿಸದಿದ್ದರೆ ವಚನವ ನೀನು
ಮಡಿಯುವೆ ನಾನೇ ವಿಷವನು ಕುಡಿದು
ಕಾಣುತ ಎನ್ನಯ ಶವವನು ನೀನು
ಸುಖಿಸುತ ರಾಮನ ಪಟ್ಟವ ಕಟ್ಟು ‖ ೧೦೦ ‖

ಕೇಳುತ ಕೈಕೆಯಿ ಆಡಿದ ಮಾತನು
ಮೂರ್ಛೆಯ ಹೊಂದುತ ಏಳುತ ಮತ್ತೆ
ಕೈಕಯಿ ಕುಟಿಲಳೆ ಮನುಜಳೆ ನೀನು
ರಾಕ್ಷಸಿಯಲ್ಲದೆ ಬೇರೆಯೆ ಏನಿಹೆ ‖ ೧೦೧ ‖

ರಾಮನು ಹೋದರೆ ಉಳಿಯೆನು ನಾನು
ವಿಧವೆಯು ಆಗುತ ಸುಖಿಸುವಿಯಾ ನೀ
ರಾಮನು ಮಾಡಿದುದಾದರು ಏನು
ಕಳಿಸುವದೇತಕೆ ಕಾಡಿಗೆ ಅವನನು ‖ ೧೦೨ ‖

ಕೈಕೆಯಿ ಅಂದಳು ಕೇಳೆಲೊ ರಾಜನೆ
ಭರತನ ರಾಜ್ಯದ ಕಂಟಕ ಕಳೆಯಲು
ರಾಮನು ಕಾಡಿಗೆ ಹೋಗಲೆ ಬೇಕು
ಜನತೆಯು ರಾಮನ ಮರೆಯಲೆಬೇಕು ‖ ೧೦೩ ‖

ರಾಮಗೆ ವೈಭವ ತಪ್ಪಲಿ ಬೇಕು
ನಾರಿನ ಬಟ್ಟೆಯು ಉಡಲೀ ಬೇಕು
ಜಟೆಯನು ಬಿಡುತಲಿ ತಾಪಸ ವೇಷದಿ
ಕ್ಷತ್ರಿಯ ವೃತ್ತಿಯು ಮರೆಯುಲು ಬೇಕು ‖ ೧೦೪ ‖

ವಚನವ ಮುರಿದರೆ ನರಕಕೆ ಹೋಗುವಿ
ಜನರಲಿ ನಿನ್ನಯ ಗೌರವ ಉಳಿಯದು
ಜಗದಲಿ ಯಾರೂ ನಂಬರು ನಿನ್ನನು
ನಿನ್ನಯ ಎದುರಲಿ ಕೊಡುವೆನು ಪ್ರಾಣವ ‖ ೧೦೫ ‖

ರಾಜನು ಕೊರಗಿದ ರಾತ್ರಿಯು ಎಲ್ಲಾ
ಕಷ್ಟವ ನೋಡುತ ನಲಿದಳು ರಾಣಿಯು
ಬಲಿಯಲಿ ಬಿದ್ದಿಹ ರಾಜನ ನೋಡುತ
ಆದಳು ಕಠಿನಳು ಇನ್ನೂ ಹೆಚ್ಚು ‖ ೧೦೬ ‖

ಬೆಳಗಿನ ಸಮಯದಿ ಕೈಕೆಯಿ ಕರೆದಳು
ಸುಮಂತ ಮಂತ್ರಿಯ ಕೋಪದ ಭವನಕೆ
ನೋಡುತ ಅವನನು ಅಂದಳು ರಾಣಿಯು
ರಾಮನ ಕಾಣುವ ಇಚ್ಛೆಯು ರಾಜಗೆ ‖ ೧೦೭ ‖

ನಿನ್ನಿನ ಇರುಳಲಿ ನಿದ್ರೆಯು ಇಲ್ಲದೆ
ಕಳೆದಿಹ ರಾಜರು ಬಾರರು ಅಲ್ಲಿಗೆ
ಇಲ್ಲಿಗೆ ರಾಮನ ಕರೆಯಿರಿ ಈಗಲೆ
ಇದುವೆ ರಾಜನ ಆಜ್ಞೆಯು ಪಾಲಿಸು ‖ ೧೦೮ ‖

ನಡೆದನು ಸುಮಂತ ರಾಮನ ಕರೆಯಲು
ದಾರಿಯಲೆಲ್ಲೆಡೆ ಜನಗಳ ಸಂದಣಿ
ಹೊರಗಿನ ಪ್ರಜೆಗಳು ಬಂದಿಹರೆಷ್ಟೋ
ಕಂಡಿತು ಎಲ್ಲೆಡೆ ಹಬ್ಬದ ಸಂಭ್ರಮ ‖ ೧೦೯ ‖

ರಾಮನ ನೋಡಲು ಜನತೆಯ ಸಂದಣಿ
ಮುತ್ತಿದೆ ರಾಮನ ಭವನದ ಸುತ್ತಲು
ಹೋದನು ಮಂತ್ರಿಯು ವಿಷಯವ ತಿಳಿಸಿದ
ರಾಮನು ಹೊರಟನು ರಾಜನ ಕಾಣಲು ‖ ೧೧೦ ‖

ಜೊತೆಗೇ ಬಂದನು ಲಕ್ಷ್ಮಣ ಕೂಡಾ
ದಾರಿಯಲೆಲ್ಲೆಡೆ ನೋಡುತ ಜನರು
ಮಾಡುತಲಿದ್ದರು ಜಯಜಯಕಾರವ
ಮುಟ್ಟಿದ ರಾಮನು ಅಂತಃಪುರವನು ‖ ೧೧೧ ‖

ಕಂಡನು ತಂದೆಯ ದೈನ್ಯದ ಮೂರ್ತಿಯ
ಎಂದೂ ಕಾಣದ ನೋಟವು ಇದ್ದಿತು
ಮಣಿದನು ತಂದೆಯು ಪಾದಕೆ ರಾಮನು
ನಂತರ ಮಣಿದನು ಕೈಕೆಯಿ ಪಾದಕೆ ‖ ೧೧೨ ‖

ತಂದೆಯು ಅಂದನು ರಾಮನೆ ಕೇಳೈ
ಮುಂದಿನ ಶಬ್ದವು ಹೊರಡಲೇ ಇಲ್ಲವು
ಕಣ್ಣಲಿ ನೀರದು ಹರಿಯುತಲಿದ್ದಿತು
ಗಂಟಲು ಕಟ್ಟಿತು ಕುಸಿದನು ದಶರಥ ‖ ೧೧೩ ‖

ನೋಡುತ ಈ ಪರಿ ರಾಜನ ದೈನ್ಯವ
ಕೇಳಿದ ರಾಮನು ಕೈಕೆಯಿ ಮಾತೆಗೆ
ತಾಯಿಯೆ ತಂದೆಗೆ ಆದುದು ಏನದು
ದುಃಖವು ತುಂಬಿವೆ ಮಾತೇ ಬಾರವು ॥ ೧೧೪ ॥

ತಪ್ಪನು ಮಾಡಿಹೆನೇನದು ನಾನು
ಭರತನು ಸೌಖ್ಯವೆ ಕುಶಲವೆ ಎಲ್ಲವು
ದುಃಖದ ಸುದ್ದಿಯು ಬಂದಿದೆ ಏನದು
ಈ ಪರಿ ತಂದೆಯ ಎಂದೂ ಕಾಣೆನು ॥ ೧೧೫ ॥

ಕೈಕೆಯಿರಾಣಿಯು ಲಜ್ಜೆಯ ತೊರೆದು
ಅಂತಹದೇನೂ ಆಗಲೆ ಇಲ್ಲವು
ರಾಜಗೆ ಕೋಪವು ಕಷ್ಟವು ಇಲ್ಲವು
ಮನದಲಿ ಇದ್ದುದ ಹೇಳಲು ಹೆದರಿಕೆ ॥ ೧೧೬ ॥

ರಾಜಗೆ ನೀನೋ ಮೆಚ್ಚಿನ ಕುವರನು
ಆದುದರಿಂದಲೆ ಹೇಳನು ವಿಷಯವ
ಕೊಟ್ಟಿಹ ವಚನವ ನಡೆಸಲು ಆಗದೆ
ಮಿಡುಕುತಲಿರುವನು ಪರಿಪರಿಯಿಂದಲಿ ॥ ೧೧೭ ॥

ಕೊಟ್ಟಿಹ ಹಿಂದೆಯೆ ವರಗಳನೆರಡು
ಕೇಳಿದೆನಿಂದೆಯೆ ಅವುಗಳ ನಾನು
ಕೊಡುವದು ಆಗದೆ ಸಂಕಟಪಡುವನು
ಒಪ್ಪುವದಾದರೆ ಹೇಳುವೆನೀಗಲೆ ॥ ೧೧೮ ॥

ತಂದೆಗೆ ಯೋಗ್ಯನು ಮಗನೇ ನೀನು
ತಂದೆಯ ವಚನವ ನಡೆಸುವದಾದರೆ
ತಂದೆಯ ಗೌರವ ಉಳಿಸುವದಾದರೆ
ಹೇಳುವೆ ಎಲ್ಲವ ಈಗಲೆ ನಿನಗೆ ॥ ೧೧೯ ॥

ರಾಮನು ಅಂದನು ಮಾತೆಯೆ ದೇವೀ
ಏನಿದು ಈ ಪರಿ ಮಾತನು ಆಡುವೆ
ತಂದೆಯ ಮಾತದು ವೇದಕೆ ಸರಿಸಮ
ಹೇಳಿರಿ ಒಪ್ಪುವೆ ತಪ್ಪದೆ ಅದನು ॥ ೧೨೦ ॥

ತಂದೆಯೆ ಎನಗೆ ಗುರುವೂ ದೊರೆಯೂ
ವಿಷವನು ಕೊಟ್ಟರೆ ಕುಡಿಯುವೆ ನಾನು
ಬೆಂಕಿಲಿ ಬೀಳಲು ಆಜ್ಞೆಯ ಆದರೆ
ಸಿದ್ಧನು ಇರುವೆನು ಜೀವವನೀಯಲು ॥ ೧೨೧ ॥

ಸಂಶಯವೇತಕೆ ತಾಯಿಯೆ ಹೇಳು
ನಡೆಸುವೆ ತಂದೆಯ ವಚನವ ನಾನು
ಕೈಕೆಯಿ ಅಂದಳು ರಾಮನೆ ಹಿಂದಕೆ
ಆಯಿತು ಯುದ್ಧವು ದೇವಾಸುರರಲಿ ॥ ೧೨೨ ॥

ಕದನವು ಭೀಕರ ಆದರಲಿ ರಾಜನು
ಹೊಂದುತ ಗಾಯವ ಬಿದ್ದನು ಕೆಳಗಡೆ
ಒಯ್ದೆನು ಅವನನು ರಕ್ಷೆಯ ತಾಣಕೆ
ಕೊಟ್ಟನು ಆಗಲೆ ವರಗಳನೆರಡನು ॥ ೧೨೩ ॥

ವರಗಳನೆರಡನು ಕೇಳದೆ ಉಳಿಸಿದೆ
ವರಗಳ ನೆನಪಿಸಿ ಕೇಳಿದೆ ಇಂದೇ
ಇಂದೆಯೆ ರಾಮನೆ ರಾಜ್ಯವ ತೊರೆದು
ಜಟೆಯನು ಧರಿಸುತ ನಾರನು ಉಟ್ಟು ॥ ೧೨೪ ॥

ಹೋಗಲು ಸಿದ್ಧನೆ ಕಾಡಿಗೆ ನೀನು
ಅಲ್ಲದೆ ಕಾಡಲಿ ಕಳೆಯಲು ಬೇಕು
ವರ್ಷ ಚತುರ್ದಶ ಮುಗಿಯುವ ವರೆಗೂ
ರಾಜ್ಯದ ಕಡೆಗೆ ನೋಡದೆ ಎಂದಿಗು ॥ ೧೨೫ ॥

ಪಟ್ಟದ ಸಿದ್ಧತೆ ಹಾಗೆಯೆ ಇರಲಿ
ಭರತಗೆ ಪಟ್ಟವು ಆಗಲಿ ಇದರಲಿ
ರಾಜ್ಯವ ಆಳಲಿ ಭರತನೆ ಮುಂದೂ
ಎಂದಿಗೂ ಬರದಿರು ಮಧ್ಯದಿ ನೀನು ॥ ೧೨೬ ॥

ರಾಮನು ನಮಿಸುತ ತಾಯಿಯ ಪಾದಕೆ
ತಂದೆಯ ವಚನವ ನಡೆಸುವೆ ತಾಯಿಯೆ
ಕಳಿಸಿರಿ ಈಗಲೆ ಭರತನ ಕರೆಸಲು
ಪಟ್ಟವ ಕಟ್ಟಿರಿ ಮೆಚ್ಚಿನ ತಮ್ಮಗೆ ॥ ೧೨೭ ॥

ಶೂರನು ಧಾರ್ಮಿಕ ಶುದ್ಧನು ಇರುವನು
ರಾಜ್ಯವ ಆಳಲು ಯೋಗ್ಯನು ನಿಶ್ಚಿತ
ಭರತನಿಗೋಸ್ಕರ ಜೀವವ ತೊರೆಯಲು
ಸಿದ್ಧನು ಇರುವೆನು ಸಂಶಯ ಬೇಡಾ ॥ ೧೨೮ ॥

ಆದರೆ ತಂದೆಯು ಮಾತನು ಆಡನು
ಕಾಡಿಗೆ ಹೋಗುವ ಮೊದಲಿಗೆ ಒಮ್ಮೆ
ಹರಸಿದರಾಯಿತು ಹೊರಡುವೆ ಕೂಡಲೆ
ಕೇಳುತ ಉಬ್ಬಿದ ಕೈಕೆಯಿ ಅಂದಳು ॥ ೧೨೯ ॥

ರಾಮನೆ ನಿನ್ನಯ ಮೋಹದಿ ರಾಜನು
ಮಾತನು ಆಡನು ಚಿಂತೆಯು ಏತಕೆ
ಕಾಡಿಗೆ ಹೋಗಲು ಈಗಲೆ ಹೊರಡು
ರಾಜನ ಚಿಂತೆಯು ಕ್ಷಣಿಕವು ಇರುವದು ॥ ೧೩೦ ॥

ರಾಮನು ಕಾಡಿಗೆ ಹೋಗುವ ವರೆಗೂ
ಸ್ನಾನವ ಮಾಡೆನು ಊಟವ ಮಾಡೆನು
ಎನ್ನುತಲಿರುವನು ನಿನ್ನಯ ತಂದೆಯು
ತಡವನು ಮಾಡದೆ ಕೂಡಲೆ ಹೊರಡು ॥ ೧೩೧ ॥

ಕೇಳುತ ಎಲ್ಲವ ಕುಸಿದನು ರಾಜನು
ಮೂರ್ಛೆಯ ಹೊಂದುತ ಬಿದ್ದನು ಕೆಳಗೆ
ನಮಿಸುತ ತಂದೆಯ ತಾಯಿಯ ಪಾದಕೆ
ತಂದೆಯು ಹೇಳದೆ ಇದ್ದರು ಕೂಡಾ ॥ ೧೩೨ ॥

ತಾಯಿಯ ಆಜ್ಞೆಯು ಸಾಲದೆ ಎನಗೆ
ಜನನಿಯ ಕಾಣುತ ಸೀತೆಗೆ ಹೇಳುತ
ಹೊರಡುವೆ ಇಂದೆಯೆ ಕಾಡಿಗೆ ನಾನು
ಎನ್ನುತ ರಾಮನು ಬಂದನು ಹೊರಗಡೆ ॥ ೧೩೩ ॥

ಹೊರಗಡೆ ನಿಂತಿಹ ಗೆಳೆಯರಿಗೆಲ್ಲಾ
ಹೇಳಿದ ವಿಷಯವ ರಾಜ್ಯದ ತ್ಯಾಗದ
ಲಕ್ಷ್ಮಣ ಉರಿದನು ಸಿಟ್ಟಿನ ಭರದಲಿ
ನಂತರ ಬಂದವು ಕಣ್ಗಳು ತುಂಬಿ || ೧೩೪ ||

**೮೦. ರಾಮನು ತಾಯಿಯ ಅರಮನೆಗೆ ಬಂದುದು**

ಹಬ್ಬಿತು ಸುದ್ದಿಯು ಕಿಚ್ಚಿನ ತೆರದಿಂ
ರಾಮನು ನಡೆದನು ಜನನಿಯ ಭವನಕೆ
ತಾಯಿಯು ಇದ್ದಳು ಪೂಜಾಗೃಹದಲಿ
ದೇವರ ಕರುಣೆಯ ಯಾಚಿಸುತಿದ್ದಳು || ೧೩೫ ||

ಜನನಿಯು ಬಿಳಿಯಿಹ ದುಕೂಲವನುಟ್ಟು
ಹೋಮವ ಮುಗಿಸುತ ದಾನವ ಕೊಟ್ಟು
ಕಾಯುತಲಿದ್ದಳು ರಾಮನ ಬರವನು
ಹೋಗುತ ರಾಮನು ಪಾದಕೆ ಮಣಿದನು || ೧೩೬ ||

ರಾಮನೆ ಊಟವ ಮಾಡೆಲೊ ನೀನು
ದೇವರ ಪ್ರಸಾದ ತೆಗೆದುಕೊ ನೀನು
ಎನ್ನುತ ಮಣೆಯನು ಕೊಟ್ಟಳು ಕೂಡಲು
ಮುಟ್ಟುತ ಮಣೆಯನು ಅಂದನು ರಾಮನು || ೧೩೭ ||

ತಾಯಿಯೆ ಮಣೆಯಲಿ ಕೂಡೆನು ಇನ್ನು
ರಾಜರ ಭೋಗವ ತೊರೆದಿಹೆ ಈಗಲೆ
ತಂದೆಯ ವಚನವ ಪಾಲಿಸ ಹೊರಟಿಹೆ
ಕಾಡಿಗೆ ಹೋಗುವೆ ನಾರನು ಉಟ್ಟು || ೧೩೮ ||

ಕಾಡಿದೆ ಸಂಕಟ ನಿನಗೂ ಸೀತೆಗು
ಭರತನು ಆಗುವ ರಾಜನು ಇನ್ನು
ತಾಪಸ ವೇಷದಿ ಕಾಡಲಿ ತಿರುಗುವೆ
ಗಡ್ಡೆ ಗೆಣಸುಗಳೆ ಆಹಾರವೆನಗೆ || ೧೩೯ ||

ಹಾಗೆಯೆ ಕಳೆಯುವೆ ಹದಿನಾಲ್ಕು ವರುಷ
ತಂದೆಯು ಕೊಟ್ಟಿಹ ಆಜ್ಞೆಯು ಎನಗೆ
ಎನ್ನುತ ರಾಮನು ಹೇಳಿದನೆಲ್ಲವ
ಜನನಿಯು ಬಿದ್ದಳು ಎಚ್ಚರತಪ್ಪುತ || ೧೪೦ ||

ಎಚ್ಚರ ತಿಳಿಯುತ ಎದ್ದಳು ಮಾತೆಯು
ರಾಮನೆ ಪಾಪಿಯು ನಿಜಕೂ ನಾನಿಹೆ
ಕೈಕೆಯಿ ರೂಪಕೆ ರಾಜನು ಮರೆತನು
ಎನ್ನಯ ಸ್ಥಿತಿಯಿದೆ ದಾಸಿಗೆ ಕೀಳು || ೧೪೧ ||

ನಿನ್ನನು ಪಡೆಯಲು ಪಟ್ಟಿಹ ಬವಣೆಯು
ಆಯಿತು ಎಲ್ಲವು ವ್ಯರ್ಥವು ಕೊನೆಗೆ
ಆಗುವೆನಿನ್ನು ದಾಸಿಗೆ ಕಡೆಯು
ಅಂತ್ಯದಿ ಆಗುವೆ ಭರತನ ದಾಸಿಯು || ೧೪೨ ||

ನಾನೂ ಬರುವೆನು ಕಾಡಿಗೆ ಜೊತೆಗೆ
ಅರಮನೆಗಿಂತಲು ಎಲೆಮನೆ ಲೇಸು
ಅಲ್ಲಿಯೆ ಇದ್ದರೆ ಕಾಣುವೆ ನಿನ್ನನು
ಮುಖವನು ನೋಡುತ ಕಳೆಯುವೆ ಜೀವನ || ೧೪೩ ||

ಕೇಳುತಲಿದ್ದನು ಬದಿಯಲಿ ಲಕ್ಷ್ಮಣ
ಮಾತೆಯ ಕೈಯನು ಹಿಡಿಯುತ ಅಂದನು
ತಂದೆಯ ಬುದ್ಧಿಯು ಕೆಟ್ಟಿದೆ ಈಗ
ಹೆಣ್ಣಿನ ಮೋಹಕೆ ಸಿಲುಕಿದೆ ಪೂರ್ಣ || ೧೪೪ ||

ಮುಪ್ಪಿನ ಸಮಯದಿ ಭೋಗವು ಮುಚ್ಚಿದೆ
ರಾಮನು ಮಾಡಿದ ಅಪರಾಧವೇನು
ಅಣ್ಣನೆ ನೀನೇ ಪಟ್ಟಕೆ ಕೂಡು
ನಿಲ್ಲುವೆ ಸಂಗಡ ಬಿಲ್ಲಿನ ಸಹಿತ || ೧೪೫ ||

ತಿಳಿಯಲಿ ಎಲ್ಲರು ಯಮನೇ ಎಂದು
ಕೊಲ್ಲುವೆ ಎಲ್ಲರ ಯಾರೇ ಬರಲಿ
ತಂದೆಯೆ ಇಲ್ಲವೆ ಭರತನೆ ಬರಲಿ
ಅಣ್ಣನೆ ಪಟ್ಟಕೆ ಯೋಗ್ಯನು ನಿಜಕು || ೧೪೬ ||

ಇಡುವೆನು ಆಣೆಯು ಧನುವಿನ ಮೇಲೆ
ಇಡುವೆನು ಆಣೆಯು ಸತ್ಯದ ಮೇಲೆ
ಇಡುವೆನು ಆಣೆಯು ಪುಣ್ಯದ ಮೇಲೆ
ತಂದೆಯೆ ಬಂದರು ಕೊಲ್ಲುವೆ ಅವನನು || ೧೪೭ ||

ಜನನಿಯು ಅಂದಳು ರಾಮಗೆ ಆಗ
ಕೇಳಿದೆಯಾ ಮಗು ಲಕ್ಷ್ಮಣ ಮಾತನು
ತಂದೆಯ ಮಾತನು ಕೇಳಲು ಸಿದ್ಧನು
ತಾಯಿಯ ಮಾತನು ಕೇಳುವದಿಲ್ಲವೆ || ೧೪೮ ||

ಕಾಡಿಗೆ ಹೋಗಲು ಅಪ್ಪಣೆ ಕೊಡೆನು
ಧರ್ಮ ಸೂಕ್ಷ್ಮವನು ತಿಳಿದಿಹ ನೀನು
ಮಾತನು ಮೀರುತ ಹೋಗುವಿ ಹೇಗದು
ಜನನಿಯೆ ಬಲ್ಲೆನು ನಿನ್ನಯ ದುಃಖವ || ೧೪೯ ||

ತಂದೆಯ ವಚನವ ಉಳಿಸಲು ಹೊರಟಿಹೆ
ತಂದೆಯ ಆಜ್ಞೆಯು ವೇದಕೆ ಸರಿಸಮ
ಭಾರ್ಗವ ರಾಮನು ಕೊಂದನು ತಾಯಿಯ
ಆಕಳ ಕೊಂದನು ಕಂಡುವು ಋಷಿವರ || ೧೫೦ ||

ಲಕ್ಷ್ಮಣ ಬಲ್ಲೆನು ನಿನ್ನಯ ಪ್ರೀತಿಯ
ಹಾಗೆಯೆ ಬಲ್ಲೆನು ನಿನ್ನಯ ಶಕ್ತಿಯ
ತಾಯಿಗೆ ತಿಳಿಯದು ಇಂದ್ರಿಯ ನಿಗ್ರಹ
ಲೋಕದಿ ಧರ್ಮವೇ ಶ್ರೇಷ್ಠವು ಎಂದು || ೧೫೧ ||

ತಂದೆಗೆ ತಾಯಿಗೆ ಭೂಸುರ ಜನರಿಗೆ
ಕೊಟ್ಟಿಹ ಮಾತನು ತಪ್ಪಲು ಬಾರದು
ಕೈಕೆಯಿ ತಾಯಿಯು ಕೊಟ್ಟಿಹ ಆಜ್ಞೆಯು
ತಂದೆಯ ಅಪ್ಪಣೆ ಅಲ್ಲದೆ ಏನು || ೧೫೨ ||

ಮಾತೆಯೆ ಎನ್ನನು ಹರಸುತ ಕಳುಹಿಸು
ವ್ರತವನು ಮುಗಿಸುತ ಬರುವೆನು ಪುನಃ
ಎಲ್ಲರು ನಾವೂ ವಚನವ ಪಾಲಿಸಿ
ಉಳಿಸುವೆ ಗೌರವ ವಂಶದ ಧರ್ಮದ || ೧೫೩ ||

ತಾಯಿಯು ಅಂದಳು ಏನೇ ಆಗಲಿ
ಅಪ್ಪಣೆ ಕೊಡೆನಾ ಎಂದಿಗೂ ನಿಶ್ಚಿತ
ನಿನ್ನನು ತೊರೆಯುತ ಬದುಕೆನು ಎಂದೂ
ರಾಮನು ಅಂದನು ತಾಯಿಗೆ ತಪ್ಪುಗೆ || ೧೫೪ ||

ಜಗದಲಿ ಧರ್ಮದ ಫಲಗಳು ಮೂರು
ಧರ್ಮಾರ್ಥಕಾಮ ಇರುವವು ಅವುಗಳು
ಪತ್ನಿಯು ಆಗುತ ಧರ್ಮವ ಮಾಡುತ
ಪ್ರಿಯತಮೆ ಆಗುತ ಕಾಮವ ಹೊಂದುತ || ೧೫೫ ||

ಪುತ್ರನ ಮೂಲಕ ಧನವನು ಪಡೆಯುತ
ಹೆಣ್ಣಿಗೆ ಇರುವದು ಧರ್ಮವು ಈ ಪರಿ
ವೃದ್ಧನು ಪತಿಯನು ಬಿಡುತಲಿ ಬಂದರೆ
ಹೆಣ್ಣಿಗೆ ಧರ್ಮವು ಅಲ್ಲವೆ ಅಲ್ಲಾ || ೧೫೬ ||

ತಂದೆಯು ಮಾತದು ತಪ್ಪೇ ಇರಲಿ
ಬಾಧ್ಯನು ಇರುವನು ಅಪ್ಪಣೆ ಕೊಡಲು
ಎಮ್ಮಯ ಧರ್ಮವು ಪಾಲನೆ ಮಾತ್ರವು
ರಾಜ್ಯದ ಆಶೆಗೆ ಧರ್ಮವ ಬಿಡಲೇ || ೧೫೭ ||

ರಾಮನು ತಿರುಗಿದ ಲಕ್ಷ್ಮಣನೆಡೆಗೆ
ಕೋಪವ ಶೋಕವ ತಡೆಯುತ ನೀನು
ಈಗಲೆ ನಿಲ್ಲಿಸು ಪಟ್ಟದ ಸಂಭ್ರಮ
ದೈವದ ಆಟವು ಎಲ್ಲವು ಇದುವೆ || ೧೫೮ ||

ಕೈಕೆಯಿ ತಾಯಿಯು ನಿಮಿತ್ತ ಮಾತ್ರಳು
ಕೇಳುತ ಈ ಪರಿ ಉರಿದನು ಲಕ್ಷ್ಮಣ
ಅಣ್ಣನೆ ಕ್ಷಮಿಸೈ ದೈವವು ಎಲ್ಲಿದೆ
ಪೌರುಷ ಇದ್ದರೆ ದೈವವು ಬಾರದು ||೧೫೯||

ನಿನ್ನನು ತಡೆಯಲು ಇರುವರು ಯಾರದು
ತೋರುವೆ ಪೌರುಷ ಇಂದಿನ ದಿನವೇ
ಮೋಹದಿ ಕೊಟ್ಟಿಹ ಆಜ್ಞೆಯು ಸರಿಯೇ
ಪಾಲಿಸಬೇಕೇ ತಪ್ಪಿದ ಆಜ್ಞೆಯ ||೧೬೦||

ರಾಮನು ಅಪ್ಪುತ ಲಕ್ಷ್ಮಣ ತಮ್ಮನ
ಏನಿದು ಲಕ್ಷ್ಮಣ ಕೋಪವ ಬಿಡು ನೀ
ಕೋಪದ ಸಮಯದಿ ಚಿಂತನೆ ಕುಂಠಿತ
ಮಾಡಿಹೆ ನಿಶ್ಚಯ ಕಾಡಿಗೆ ಹೋಗಲು ||೧೬೧||

ತಾಯಿಯೆ ತಿಳಿದಿರು ತಂದೆಯು ಇರುವನು
ಕೈಕೆಯಿ ಬಲೆಯಲಿ ದುಃಖಿತ ಇಂದು
ನೋಡದೆ ಇದ್ದರೆ ಅವನನು ನೀನು
ಬದುಕುವದಿಲ್ಲವು ಬಹುದಿನ ಅವನು ||೧೬೨||

ಇಂತಹ ಸಮಯದಿ ನಿನ್ನಯ ಇರುವದು
ಇಲ್ಲಿಯೆ ಯೋಗ್ಯವು ತಿಳಿದಿರು ನೀನು
ಇದುವೆ ಸನಾತನ ಧರ್ಮದ ತಿರುಳೂ
ಹರಸುತ ಕುವರನ ಒಪ್ಪಿದಳವಳು ||೧೬೩||

ತಾಯಿಯೆ ಬರುವೆನು ವನವಾಸ ಮುಗಿಸಿ
ಭರತನ ಬಲ್ಲೆನು ಸದ್ಗುಣಿ ಇರುವನು
ಎನ್ನಯಕಿಂತಲು ಹೆಚ್ಚಿಗೆ ಅವನು
ನೋಡುವ ನಿನ್ನನು ತಾಯಿಯು ಎಂದು || ೧೬೪ ||

ಎನ್ನಯ ಗಮನವು ತಂದೆಗೆ ದುಃಖವು
ನೋಡುತ ಅವನನು ಸೇವಿಸು ತಾಯಿಯೆ
ಸೀತೆಯು ಇರುವಳು ಸೇವೆಯ ಮಾಡಲು
ಅಲ್ಲದೆ ಇರುವನು ಲಕ್ಷ್ಮಣ ಕೂಡಾ || ೧೬೫ ||

## ೧೧. ಸೀತಾ ರಾಮರ ಸಂವಾದ

ರಾಮನು ನಮಿಸುತ ತಾಯಿಯ ಪಾದಕೆ
ಹೊರಟನು ಭವನಕೆ ಸೀತೆಯ ಕಾಣಲು
ಹೇಳಿದ ರಾಮನು ಜರುಗಿದ ಸಂಗತಿ
ಕಾಡಿಗೆ ಹೋಗುವ ವಿಷಯವ ಕುರಿತು || ೧೬೬ ||

ಬಂದೆನು ಇಲ್ಲಿಗೆ ತಿಳಿಸಲು ನಿನಗೆ
ಹೋಗುವೆ ಈಗಲೆ ಕಾಡಿಗೆ ನಾನು
ಭರತನು ಆಳುವ ರಾಜ್ಯವ ಇನ್ನು
ಸೇವೆಯೆ ಮಾಡೆಲೆ ತಂದೆಯ ತಾಯಿಯ || ೧೬೭ ||

ಆರ್ಯನೆ ಬರುತಿದೆ ನಗೆಯದು ಎನಗೆ
ಹೇಳುವಿಯಲ್ಲವೆ ಹಗುರದಿ ಎಲ್ಲವ
ತಂದೆಯು ತಾಯಿಯು ಸೋದರರೆಲ್ಲರು
ತಮ್ಮಯ ಕರ್ಮದ ಫಲಕೇ ಬಾಧ್ಯರು || ೧೬೮ ||

ಹೆಂಡತಿಯೊಬ್ಬಳೇ ಇರುವಳು ಬಾಧ್ಯಳು
ಗಂಡನ ಕರ್ಮದ ಜೊತೆಗೇ ಅವಳೂ
ಪತಿಯನು ಬಿಟ್ಟರೆ ಗತಿಯೇ ಇಲ್ಲವು
ತಂದೆಯು ತಾಯಿಯು ಗೆಳತಿಯು ಯಾರೂ || ೧೬೯ ||

ಬರುವೆನು ನಾನೂ ನಿನ್ನಯ ಜೊತೆಗೇ
ಸೇವೆಗೆ ಇರುವೆನು ಭೋಗಕ್ಕೆ ಅಲ್ಲವು
ನಿನ್ನಯ ನೆರಳೇ ಆಶ್ರಯ ಎನಗೆ
ಸೇವೆಯೆ ಎನ್ನದು ಧರ್ಮವು ಅಲ್ಲವೆ || ೧೭೦ ||

ನೋಡುತ ನಲಿಯುವೆ ಬೆಟ್ಟಗುಡ್ಡಗಳ
ಮೀಯುವೆ ನದಿಯಲಿ ಪಡೆಯುವೆ ತಾವರೆ
ನೋಡುತ ಹಕ್ಕಿಯ ಕೇಳುವೆ ಇಂಚರ
ನಿನ್ನಯ ಜೊತೆಗಿರೆ ವರುಷವು ಕ್ಷಣಸಮ || ೧೭೧ ||

ಸೀತೆಯೆ ತಿಳಿದಿರು ಕಾಡಿನ ಕಷ್ಟವ
ನಿರ್ಜನ ಕಾಡಿನ ಘೋರವ ತಿಳಿ ನೀ
ಕೇಳುವೆ ಅಲ್ಲಿಯೆ ಗರ್ಜನೆ ಪಶುಗಳ
ನದಿಗಳ ಧುಮುಕುವ ಘೋರಿನ ಸಪ್ಪಳ || ೧೭೨ ||

ಮದಿಸಿದ ಆನೆಯು ಹಿಂಸಕ ಪಶುಗಳು
ನದಿಯಲಿ ಎಲ್ಲೆಡೆ ಮೊಸಳೆಗಳಿರುವವು
ಕೆಸರಲಿ ಹೋಗಲು ಆಗದು ನಿನಗೆ
ಮುಳ್ಳಿನ ಹಾಸಿಗೆ ನಡೆಯಲು ಆಗದು || ೧೭೩ ||

ಒಣಗಿದ ಎಲೆಗಳೆ ಹಾಸಿಗೆ ಅಲ್ಲಿ
ರಾತ್ರಿಯು ಕತ್ತಲೆ ಅತಿಶಯ ಘೋರವು
ಗಾಳಿಯು ಚಳಿಯದು ಕೊರೆತವು ತಡೆಯದು
ಎಲ್ಲೆಂದರಲ್ಲಿ ಸರ್ಪದ ಭಯವೂ || ೧೭೪ ||

ಅಲ್ಲದೆ ಮಿಡತೆಯು ಚೇಳು ಹುಳ ಸೊಳ್ಳೆ
ಜೀವಕೆ ದುಃಖವು ಪ್ರಾಣಕೆ ಭಯವು
ಇಲ್ಲಿಯೆ ಇರುವದು ಯೋಗ್ಯವು ನಿನಗೆ
ನಿಶ್ಚಿತ ಸಮಯದಿ ಬರುವೆನು ತಿರುಗಿ || ೧೭೫ ||

ಸೀತೆಯು ಅಂದಳು ದುಃಖದ ಭಾರದಿ
ಕಾಡಿನ ಕಷ್ಟವ ಕೇಳಿದೆ ನಾನು
ನಿನ್ನಯ ಜೊತೆಯಲಿ ಇದ್ದರೆ ನನಗೆ
ಕಷ್ಟದ ಗುರುತೇ ಆಗದು ನಿಜಕೂ || ೧೭೬ ||

ನಿನ್ನನು ತೊರೆಯುತ ಬದುಕೆನು ನಿಶ್ಚಿತ
ಕಾಡಿನ ಯೋಗವು ಇರುವದು ಎನಗೆ
ಜ್ಯೋತಿಷಿಯೊಬ್ಬನು ಹೇಳಿದ ಮೊದಲೇ
ಆಗಲಿ ಆದುವೇ ಸತ್ಯವು ಈಗಲೆ || ೧೭೭ ||

ಬಿಟ್ಟರೆ ನನ್ನನು ಇಲ್ಲಿಯೆ ಆದರೆ
ವಿಷವನು ಕುಡಿದೋ ಬೆಂಕಿಗೆ ಬಿದ್ದೋ
ನೀರಿಗೆ ಬಿದ್ದೋ ಪ್ರಾಣವ ಬಿಡುವೆನು
ಆದರು ಒಪ್ಪನು ರಾಮನು ಇನ್ನೂ || ೧೭೮ ||

ಸೀತೆಯ ಮನದಲಿ ಎದ್ದಿತು ಉರಿಯು
ಕ್ಷಾತ್ರದ ಕಿಚ್ಚದು ಹತ್ತಿತು ಭುಗಿಲು
ತಂದೆಯು ತಿಳಿದಿಹ ನಿನ್ನನು ಗಂಡು
ತಿಳಿಯನು ಎಂದೂ ಅಳಿಯನು ಹೆಣ್ಣು ॥ ೧೭೯ ॥

ಹೆದರಿಕೆ ಏಕದು ಹೇಡಿಯೇ ನೀನು
ಬಿಡುವದು ಏಕದು ಎನ್ನನು ಇಲ್ಲಿಯೆ
ತಂದೆಯು ಕೊಟ್ಟಿಹ ಧಾರೆಯ ಎರೆದು
ನಿನ್ನನು ಬಿಟ್ಟರೆ ಎಲ್ಲವು ಶೂನ್ಯವು ॥ ೧೮೦ ॥

ತಿಳಿಯದೆ ಆರ್ಯನೆ ಸಾವಿತ್ರಿಯ ಕತೆ
ಗೆದ್ದಳು ಗಂಡನ ಯಮನನು ಸೋಲಿಸಿ
ತಡೆಯುವರಾರದು ಜೊತೆಯಲಿ ಹೋಗಲು
ಹೋಗುವದೆನ್ನಯ ಧರ್ಮವೇ ಇರುವದು ॥ ೧೮೧ ॥

ನಿನ್ನಯ ಜೊತೆಯೇ ಸ್ವರ್ಗವು ಎನಗೆ
ನಿನ್ನನು ಬಿಡುವದೆ ನರಕವು ಎನಗೆ
ಎನ್ನುತ ಪಾದದಿ ಬಿದ್ದಳು ಸೀತೆಯು
ಪಾದವ ತೊಳೆದಳು ಕಣ್ಣಿನ ನೀರಲಿ ॥ ೧೮೨ ॥

ಅಪ್ಪುತ ಸೀತೆಯ ಎತ್ತಿದ ರಾಮನು
ಅಳುವದು ಬಿಡು ನೀ ಕೋಮಲೆ ಸೀತೆಯೆ
ಧರ್ಮವ ಅರಿತಿಹೆ ನಿಶ್ಚಯ ನಿಜವು
ಒಯ್ಯುವೆ ನಿನ್ನನು ಈಗಲೆ ಜೊತೆಗೆ ॥ ೧೮೩ ॥

ನಿನ್ನಯ ದುಃಖದಿ ಸುಖಿಸೆನು ನಾನು
ತಿಳಿದೆನು ನಿನ್ನಯ ಹೃದಯದ ಗುಟ್ಟನು
ಎನ್ನಯ ಸಂಗದಿ ಅಂಜಿಕೆ ಏನು
ದಾನವ ಮಾಡೆಲೆ ನಿನ್ನಯ ಆಸ್ತಿಯ || ೧೮೪ ||

ಹರ್ಷಿತಳಾದಳು ಸೀತೆಯು ಆಗಲೆ
ನೋಡುತ ಎಲ್ಲವ ಲಕ್ಷ್ಮಣನಿದ್ದನು
ದುಃಖವು ಉಕ್ಕಿತು ಅಳುತಲಿ ಅವನು
ಅಣ್ಣನ ಪಾದವ ಹಿಡಿಯುತ ಕೇಳಿದ || ೧೮೫ ||

ಬರುವೆನು ಕಾಡಿಗೆ ನಾನೂ ಜೊತೆಗೆ
ಅತ್ತಿಗೆ ನೀವೂ ಹೊರಟರೆ ಕಾಡಿಗೆ
ನಿಲ್ಲುವೆ ನಿಮ್ಮಯ ರಕ್ಷಣೆ ಮಾಡುತ
ನಿನ್ನನು ತೊರೆಯುತ ಇರಲದು ಆಗದು || ೧೮೬ ||

ನಿನ್ನನು ಬಿಟ್ಟರೆ ಏನೂ ಬೇಡಾ
ಸ್ವರ್ಗವು ಬೇಡಾ ರಾಜ್ಯವು ಬೇಡಾ
ಭೋಗವು ಎಂದೂ ಜೀವಕೆ ಆಗದು
ಸೇವೆಯೆ ಎನ್ನಯ ಜೀವನದುಸಿರೂ || ೧೮೭ ||

ಎಂದೋ ಹೇಳಿದ ಮಾತನು ಮರೆತೆಯೆ
ಎಂದಿಗು ನಿನ್ನನು ಅಗಲದು ಎಂದು
ಬರುವದು ನಿಶ್ಚಿತ ನಾನೂ ಕಾಡಿಗೆ
ಕೇಳುತ ಅಂದನು ರಾಮನು ತಮ್ಮಗೆ || ೧೮೮ ||

ಗೊತ್ತಿದೆ ನಿನ್ನಯ ಮನದಲಿ ದುಗುಡ
ನೀನೂ ಬಂದರೆ ಇಲ್ಲಿಯ ಗತಿಯೇಂ
ಎನ್ನಯ ನಿನ್ನಯ ತಾಯಿಯ ನೋಡುತ
ಕೈಕೆಯಿ ಕಡೆಯಿಂ ರಕ್ಷಿಪರಾರದು ॥ ೧೮೯ ॥

ಭರತನು ಕೈಕೆಯಿ ಮಾತನು ಮೀರನು
ನಿನ್ನಯ ಕೆಲಸವು ಇಲ್ಲಿಯೆ ಹೆಚ್ಚಿದೆ
ಲಕ್ಷ್ಮಣ ಅಂದನು ಅಣ್ಣನೆ ಕೇಳು
ಭರತನು ಇರುವನು ಧಾರ್ಮಿಕ ಕುವರನು ॥ ೧೯೦ ॥

ನೋಡುವನೆಲ್ಲರ ಗೌರವದಿಂದಲಿ
ರಾಜ್ಯದ ಮದದಿಂ ನೋಡದೆ ಹೋದರೆ
ಕೊಲ್ಲುವೆ ಆವನನು ಸಂಶಯ ಬೇಡಾ
ಹಿರಿಯಳು ಮಾತೆಯ ಚಿಂತೆಯು ಏಕೆ ॥ ೧೯೧ ॥

ಆವಳಿಗೆ ಇರುವವು ಸಾಸಿರ ಹಳ್ಳಿಯು
ಪೋಷಿಪಳವಳೇ ಎಷ್ಟೋ ಜನರನು
ಚಿಂತೆಯ ಬಿಡು ನೀ ಇಲ್ಲಿಯದೆಲ್ಲವ
ಕಾಡಿಗೆ ಬರುತಲಿ ಸೇವೆಯ ಮಾಡುವೆ ॥ ೧೯೨ ॥

ಎಲೆಮನೆ ಕಟ್ಟುವೆ ಹಣ್ಣನು ತರುವೆ
ದಾರಿಯ ಬಿಡಿಸುತ ಮುಂದಕೆ ನಡೆಯುವೆ
ಮಲಗಿದ ಸಮಯದಿ ಕಾಯುವೆ ನಿಮ್ಮನು
ನಿಮ್ಮಯ ರಕ್ಷಣೆ ಎನ್ನಯ ವ್ರತವು ॥ ೧೯೩ ॥

ರಾಮನು ಒಪ್ಪಿದ ಸಂತಸದಿಂದಲಿ
ಈಗಲೆ ಹೋಗುತ ಎಲ್ಲರ ಒಪ್ಪಿಸು
ಜನಕನು ಕೊಟ್ಟಿಹ ಬಿಲ್ಲುಗಳೆರಡನು
ಇಟ್ಟಿಹೆ ಗುರುಗಳ ಹತ್ತಿರ ನಾನು ॥ ೧೯೪ ॥

ಅಲ್ಲದೆ ಅಭೇದ್ಯ ಕವಚಗಳೆರಡನು
ಅಕ್ಷಯ ಬಾಣದ ಬತ್ತಳಿಕೆಗಳನು
ಚಿನ್ನದ ಹಿಡಿಕೆಯ ಕತ್ತಿಗಳೆರಡನು
ಕೊಡಲಿ ಪಡೆಯುತ ಈಗಲೆ ಬಾ ನೀ ॥ ೧೯೫ ॥

ಲಕ್ಷ್ಮಣ ಹೋಗುತ ಅನುಮತಿ ಪಡೆಯುತ
ಆಯುಧವೆಲ್ಲವ ತಂದನು ಜೊತೆಗೆ
ರಾಮನು ಕರೆಸಿದ ದಾನವ ಮಾಡಲು
ವಸಿಷ್ಠಪುತ್ರನು ಸುಯಜ್ಞನನ್ನು ॥ ೧೯೬ ॥

ಅಲ್ಲದೆ ಕರೆಸಿದ ಧಾರ್ಮಿಕ ದ್ವಿಜರನು
ಅಲ್ಲದೆ ಒಡವರ ಜನರನು ಕರೆಸಿದ
ಸೇವಕ ಜನರನು ಕರೆಸುತ ಕೊಟ್ಟನು
ತನ್ನಯ ಆಸ್ತಿಯನೆಲ್ಲವ ಆತನು ॥ ೧೯೭ ॥

ಲಕ್ಷ್ಮಣ ಸೀತೆಯು ಕೊಟ್ಟರು ದಾನವ
ಇದ್ದುದನೆಲ್ಲವ ಕೊಟ್ಟರು ಅವರು
ಬಂದನು ಆಗಲೆ ತ್ರಿಜಟ ಋಷಿವರ
ಇದ್ದುದು ಅವನದು ಊಂಛವೃತ್ತಿಯು ॥ ೧೯೮ ॥

ನೆಲದಲಿ ಬಿದ್ದಿಹ ಕಾಳನು ಆರಿಸಿ
ಹೊಟ್ಟೆಯ ಪೋಷಣೆ ಮಾಡುವ ವ್ರತವು
ಹೆಂಡತಿ ಮಕ್ಕಳು ಬಡತನ ಅತಿಶಯ
ದಾನವ ಕೇಳಲು ರಾಮನ ಕಡೆಗೆ || ೧೯೯ ||

ನಕ್ಕನು ರಾಮನು ತ್ರಿಜಟ ಋಷಿಯೇ
ಬಡಿಗೆಯ ಬೀಸುತ ತಾಣವ ತೋರಿಸು
ಅಲ್ಲಿಯ ವರೆಗೂ ಕೊಡುವೆನು ಗೋಧನ
ತ್ರಿಜಟೆಯು ಬೀಸಿದ ಬಡಿಗೆಯ ಆಗಲೆ || ೨೦೦ ||

ಬಿದ್ದಿತು ಅದುವೆ ಸರಯೂ ತೀರದಿ
ಅಲ್ಲಿಯತನಕವ ಕೊಟ್ಟನು ಗೋಧನ
ಅಲ್ಲದೆ ಅಂದನು ರಾಮನು ಋಷಿಗೆ
ಅಂದೆನು ಮೋಜಿಗೆ ಬೀಸಲು ಬಡಿಗೆಯ || ೨೦೧ ||

ಅಲ್ಲದೆ ಗೋಧನ ಪಡೆಯಿರಿ ಇನ್ನೂ
ಅಂದನು ತ್ರಿಜಟೆ ಬೇಡವು ಏನೂ
ಗೋವನು ಬಿಟ್ಟರೆ ಬೇಕಿದೆ ಏನು
ದೇವರು ಮಾಡಲಿ ಶುಭವನು ನಿಮಗೆ || ೨೦೨ ||

## ೧೧. ಸೀತಾ-ರಾಮ-ಲಕ್ಷ್ಮಣರು ದಶರಥನಲ್ಲಿಗೆ ಬಂದುದು

ಮೂವರು ಹೊರಟರು ದಶರಥನೆಡೆಗೆ
ನಡೆಯುತ ಬಂದರು ಕೈಕೇಯಿ ಭವನಕೆ
ತಿಳಿಸಿದ ಸುಮಂತ ಮೂವರು ಬಂದುದು
ರಾಜನು ಕರೆಸಿದ ರಾಜಸ್ತ್ರೀಯರ || ೨೦೩ ||

ನಂತರ ಕರೆಸಿದ ರಾಮನ ಒಳಗೆ
ಜೊತೆಗೇ ಬಂದರು ಸೀತೆಯು ಲಕ್ಷ್ಮಣ
ಕೈಯನು ಜೋಡಿಸಿ ಬರುತಿಹ ರಾಮನ
ನೋಡುತ ದಶರಥ ಓಡಿದ ಅಪ್ಪಲು || ೨೦೪ ||

ತಡೆಯದೆ ದುಃಖವ ಬಿದ್ದನು ಕೆಳಗಡೆ
ಮೂರ್ಛೆಯ ಹೊಂದಿದ ತಂದೆಯ ನೋಡುತ
ರಾಮನು ಹಿಡಿದನು ತಂದೆಯ ತಲೆಯನು
ಎಚ್ಚರ ಬಂದುದು ನೋಡುತ ರಾಮನು || ೨೦೫ ||

ತಂದೆಯೆ ಹೋಗುವೆ ದಂಡಕವನಕೆ
ಸೀತೆಯು ಲಕ್ಷ್ಮಣ ಬರುವರು ಜೊತೆಗೆ
ಹೇಳಿದೆ ಎಷ್ಟೋ ಕೇಳರು ಅವರು
ಅಪ್ಪಣೆ ಕರುಣಿಸು ಹೋಗಲು ಎಮಗೆ || ೨೦೬ ||

ದಶರಥನೆಂದನು ರಾಮಗೆ ಆಗಲೆ
ವರವನು ಕೊಡುತಲಿ ಬುದ್ಧಿಯು ಕೆಟ್ಟಿದೆ
ಎನ್ನನು ಸೆರೆಯಲಿ ಇಡುತಲಿ ನೀನು
ರಾಜ್ಯವ ಆಳಲು ಒಪ್ಪಿಗೆ ನನ್ನದು || ೨೦೭ ||

ರಾಮನು ಅಂದನು ಜೋಡಿಸಿ ಕೈಗಳ
ತಂದೆಯೆ ಭೂಮಿಗೆ ಅಧಿಪತಿ ನೀನು
ಸಾಸಿರ ವರುಷವ ಇನ್ನೂ ಆಳು
ನಿನ್ನಯ ವಚನವ ಸುಳ್ಳನು ಮಾಡೆನು || ೨೦೮ ||

ಆಗಿನ ಸಮಯದಿ ಕೈಕೆಯಿ ಬಂದಳು
ಗಂಡನ ಕಿವಿಯಲಿ ಮೆಲ್ಲಗೆ ಅಂದಳು
ರಾಮಗೆ ಅಪ್ಪಣೆ ಕೊಡು ನೀ ಕೂಡಲೆ
ತಡೆಯದೆ ಅವರನು ಹೋಗಲು ಕಾಡಿಗೆ ॥ ೨೦೯ ॥

ದಶರಥನೆಂದನು ರಾಮನೆ ಧರ್ಮನೆ
ಆಗಲಿ ಎಲ್ಲವು ಶುಭವೂ ಮಂಗಳ
ಈ ದಿನ ರಾತ್ರಿಯು ಇಲ್ಲಿಯೆ ಕಳೆಯುತ
ನಾಳೆಯ ಬೆಳಗಿಗೆ ಹೋಗುವದೊಳಿತು ॥ ೨೧೦ ॥

ರಾಮನು ಅಂದನು ತಂದೆಯೆ ಆಗದು
ಇಂದಿನ ಮನಸೇ ನಾಳೆಗೆ ಇರುವದೆ
ರಾಜ್ಯದ ಆಶೆಯು ಇಲ್ಲವೆ ಇಲ್ಲಾ
ಭರತಗೆ ರಾಜ್ಯವ ಕೊಡುವದು ಎಲ್ಲಾ ॥ ೨೧೧ ॥

ರಾಜ್ಯವು ಬೇಡಾ ಭೋಗವು ಬೇಡಾ
ಸ್ವರ್ಗವು ಬೇಡಾ ಸೀತೆಯು ಕೂಡಾ
ಬೇಕಿದೆ ಒಂದೇ ವಚನದ ಪಾಲನೆ
ಅದುವೆ ಎನ್ನಯ ಜೀವನದುಸಿರು ॥ ೨೧೨ ॥

ದುಃಖದಿ ದಶರಥ ಅಪ್ಪಿದ ರಾಮನ
ಹಾಗೆಯೆ ಕುಸಿದನು ಬವಳಿಯು ಬಂದು
ಗೋಳಿದು ಸೀಳಿತು ಅಂತಃಪುರವನು
ಕೈಕೆಯಿ ನಿಂತಳು ಕಲ್ಲಿನ ತೆರದಲಿ ॥ ೨೧೩ ॥

ಸುಮಂತ ಮಂತ್ರಿಯು ಸಿಟ್ಟಿನ ಭರದಲಿ
ಅಂದನು ಕೈಕೇಯಿ ರಾಣಿಯೆ ಏನಿದು
ತಾಯಿಯ ಗುಣವೇ ಬಂದಿದೆ ನಿನ್ನಲಿ
ಹಠದಲಿ ಆಗಿದೆ ಬುದ್ಧಿಯು ಶೂನ್ಯವು ‖ ೨೧೪ ‖

ಕೈಕೆಯಿ ನಿಂತಳು ನಿಶ್ಚಲ ಮೂರ್ತಿಯು
ದಶರಥನೆಂದನು ರಾಮನ ಜೊತೆಗೆ
ಹೋಗಲಿ ಸೈನ್ಯವು ಧನವೂ ಸಹಿತ
ರಾಜನ ತೆರದಲಿ ಹೋಗಲಿ ವನಕೆ ‖ ೨೧೫ ‖

ಕೈಕೆಯಿ ಅಂದಳು ಆಗಲೆ ಅಲ್ಲಿಯೆ
ಕೊಡದು ರಾಮಗೆ ರಾಜ್ಯದ ವೈಭವ
ಹೋಗಲಿ ಕಾಡಿಗೆ ನಾರನು ಉಡುತಲಿ
ಕೊಡುವೆನು ಈಗಲೆ ನಾರಿನ ಬಟ್ಟೆಯ ‖ ೨೧೬ ‖

ಕೊಟ್ಟಳು ಕೈಕೆಯು ನಾರಿನ ಉಡುಗೆಯ
ಈಗಲೆ ಇಲ್ಲಿಯೆ ಬಟ್ಟೆಯ ತೊಡಿರಿ
ಜಟೆಯನು ಧರಿಸುತ ತಾಪಸ ವೇಷದಿ
ಕಾಡಿಗೆ ಹೋಗಿರಿ ವಚನವ ಪಾಲಿಸಿ ‖ ೨೧೭ ‖

ರಾಮನು ಅಂದನು ದಶರಥರಾಜಗೆ
ರಾಜ್ಯವ ಬಿಟ್ಟೇ ಹೋಗುವ ಎನಗೆ
ಭೋಗದ ಮೋಹವು ಏತಕೆ ಬೇಕು
ತಾಯಿಯು ಅಂದುದು ನಿಜವದು ಪಿತನೆ ‖ ೨೧೮ ‖

ನಂತರ ತೊಟ್ಟರು ನಾರಿನ ಬಟ್ಟೆಯು
ಎಲ್ಲರ ಎದುರಲಿ ಅಲ್ಲಿಯೆ ಆಗಲೆ
ರಾಮನು ಅಂದನು ಕೈಯನು ಜೋಡಿಸಿ
ತಂದೆಯೆ ಹೋಗುವೆ ಹರಸಿರಿ ಎಮ್ಮನು ॥ ೨೧೯ ॥

ಹೇಳುವೆ ನಿಮಗೆ ಒಂದೇ ಮಾತನು
ಎನ್ನಯ ಜನನಿಯ ದುಃಖವು ತೀರದು
ನಿಮ್ಮನು ಬಿಟ್ಟರೆ ಯಾರೂ ಇಲ್ಲವು
ನೋಡುತ ಅವಳನು ಬದುಕಿಸಿ ಅವಳನು ॥ ೨೨೦ ॥

ಪುತ್ರನ ಶೋಕವು ನಿರಂತರವಹುದು
ಎನ್ನಯ ಶೋಕದಿ ಮರಣವ ಹೊಂದವೆ
ಉಳಿಸುವ ಭಾರವು ನಿಮ್ಮನು ಕೂಡಿದೆ
ಎನ್ನುತ ರಾಮನು ತಂದೆಗೆ ನಮಿಸಿದ ॥ ೨೨೧ ॥

ಸೀತೆಯು ಅತ್ತೆಯ ಪಾದಕೆ ಮಣಿದಳು
ಸೀತೆಯೆ ರಾಮನ ನೋಡಿಕೊ ನೆಟ್ಟಗೆ
ಭೋಗವೆ ಇದ್ದರು ತ್ಯಾಗವೆ ಇದ್ದರು
ಗಂಡನು ಒಬ್ಬನೆ ದೇವರು ಸತಿಗೆ ॥ ೨೨೨ ॥

ಕಾಡಿನಲಿದ್ದರು ತಾಪಸಿಯಾದರು
ಅವನೇ ಎಲ್ಲವು ತಿಳಿದಿರು ಮಗಳೇ
ಧರ್ಮವ ಎಲ್ಲವ ತಿಳಿದಿಹ ನೀನು
ಧರ್ಮದ ಕೈಯನೆ ಹಿಡಿದಿಹೆ ನೀನು ॥ ೨೨೩ ॥

ಆತ್ತೆಯೆ ಧರ್ಮದ ಸೂಕ್ಷ್ಮವ ಬಲ್ಲೆನು
ಅಲ್ಲದೆ ರಾಮನ ಜೊತೆಯಲಿ ಇರುವೆನು
ಚಂದ್ರನ ತ್ಯಜಿಸುತ ಬೆಳಕದು ಇರುವದೆ
ತಂತಿಯು ಇಲ್ಲದೆ ವೀಣೆಯು ನುಡಿವುದೆ ॥ ೩೩೪ ॥

ಚಕ್ರವು ಇಲ್ಲದೆ ರಥವದು ಚಲಿಪದೆ
ಧರ್ಮವು ಇಲ್ಲದೆ ರಾಘವ ಇರುವನೆ
ರಾಮನು ಇಲ್ಲದೆ ಸೀತೆಯು ಇರುವಳೆ
ನಿಮ್ಮಯ ಮಾತನು ಧರಿಸಿಹೆ ಶಿರದಲಿ ॥ ೩೩೫ ॥

ನಂತರ ರಾಮನು ನಮಿಸಿದ ತಾಯಿಗೆ
ತಾಯಿಯೆ ಎಂದಿಗು ಶೋಕಿಸಬೇಡಾ
ಇರುವೆನು ವನದಲಿ ಸಂತಸದಿಂದಲಿ
ಬರುವೆನು ಬೇಗನೆ ನಿನ್ನನು ನೋಡಲು ॥ ೩೩೬ ॥

ತಂದೆಯ ಚಿಂತೆಯು ಇರುವದು ಅತಿಶಯ
ನೋಡಿರಿ ಅವನನು ಹರಸಿರಿ ಎಮ್ಮನು
ಲಕ್ಷ್ಮಣ ನಮಿಸಿದ ತಂದೆಗೆ ತಾಯಿಗೆ
ಸುಮಿತ್ರೆ ಅಂದಳು ಲಕ್ಷ್ಮಣ ಕುವರಗೆ ॥ ೩೩೭ ॥

ಅಣ್ಣನ ಭಾವಿಸು ದಶರಥನೆಂದು
ಸೀತೆಯ ತಿಳಿ ನೀ ನಾನೇ ಎಂದು
ಅಡವಿಯು ಆಗಲಿ ಅಯೋಧ್ಯೆ ನಿನಗೆ
ಎಲೆಮನೆಯಾಗಲಿ ಅರಮನೆ ಕುವರನೆ ॥ ೩೩೮ ॥

## ೧೨. ಕಾಡಿಗೆ ಪ್ರಯಾಣ

ಸುಮಂತ ಬರುತಲಿ ತಿಳಿಸಿದ ರಾಮುಗೆ
ರಥವದು ಸಿದ್ಧವು ಒಯ್ಯಲು ಕಾಡಿಗೆ
ಸೀತೆಯೆ ಏರುತ ರಥವನು ಮೊದಲು
ರಾಮನು ಹತ್ತಿದ ಲಕ್ಷ್ಮಣ ಸಹಿತದಿ || ೨೨೯ ||

ಅರಮನೆಯಾಯಿತು ಅಳುವಿನ ತಾಣವು
ಪೌರರು ಎಲ್ಲರು ಮುತ್ತುತ ರಥವನು
ಸುತ್ತುತ ರಥವನು ಅಳುತಲಿ ಎಲ್ಲರು
ನೋಡಲು ಇಚ್ಛಿಸಿ ರಾಮನ ಮುಖವನು || ೨೩೦ ||

ತಡೆಯದು ಯಾರಿಗೂ ದುಃಖದ ಒತ್ತಡ
ದಶರಥ ಬಿದ್ದನು ಮೂರ್ಛೆಯ ಹೊಂದುತ
ಅರಮನೆ ಸ್ತ್ರೀಯರ ರೋದನ ಹೆಚ್ಚಿತು
ಪೌರರು ಅತ್ತರು ಕೇಳುವರಾರು || ೨೩೧ ||

ಹೊರಟರು ಪೌರರು ರಾಮನ ಜೊತೆಗೆ
ಬರುತಿಹ ತಂದೆಯು ತಾಯಿಯು ನಡೆಯುತ
ಅಂದನು ರಾಘವ ರಥವನು ಓಡಿಸು
ನೋಡೆನು ಈ ಪರಿ ಕಷ್ಟವ ಪೂಜ್ಯರ || ೨೩೨ ||

ರಥವದು ದಾಟಿತು ಪಟ್ಟಣದಂಚನು
ಶೋಕವು ತುಂಬಿರು ಅರಮನೆಯೆಲ್ಲೆಡೆ
ಊರಿನ ತುಂಬಾ ದುಃಖದ ವಾರ್ತೆಯು
ಹೊರಟರು ಪೌರರು ರಾಮನ ಜೊತೆಗೆ ॥ ೩೩೩ ॥

ದಶರಥ ಕುಸಿದನು ಬೀದಿಯ ನಡುವೆ
ನೆನಸಿದ ಎಲ್ಲವ ಜೀವನ ಘಟ್ಟವ
ಭರತನು ರಾಜ್ಯವ ಒಪ್ಪಿದುದಾದರೆ
ತರ್ಪಣ ಕೊಡುವದೇ ಬೇಡವು ಎನಗೆ ॥ ೩೩೪ ॥

ಕೊಟ್ಟರೂ ಎನಗೆ ಸೇರದೆ ಹೋಗಲಿ
ಈಗಲೆ ಒಯ್ಯಿರಿ ಕೌಸಲ್ಯೆಯ ಕಡೆ
ಆಗಲೆ ಒಯ್ದರು ಹಿರಿಸತಿ ಭವನಕೆ
ಆದರು ಬಾರದು ಶಾಂತಿಯು ಮನಕೆ ॥ ೩೩೫ ॥

## ೮೩. ರಾಮನು ಹೋದ ನಂತರದ ಅಯೋಧ್ಯೆ

ರಾತ್ರಿಯ ಸಮಯದಿ ಕರೆದನು ಸತಿಯನು
ಎನ್ನಯ ನೋಟವು ಕಾಣದು ಈಗಲೆ
ದೃಷ್ಟಿಯು ಹೋಯಿತು ರಾಮನ ಜೊತೆಗೆ
ಕಣ್ಣಿಗೆ ಏನೂ ಕಾಣದು ಸತಿಯೇ ॥ ೩೩೬ ॥

ಸತಿಯರು ಇಬ್ಬರು ನಿಂತರು ಸೇವೆಗೆ
ಹಿರಿಯರು ಪೌರರು ಹೊರಟರು ವನಕೆ
ಜೊತೆಗೇ ಹೊರಟರು ತರುಣರು ಕೂಡಾ
ಸ್ತ್ರೀಯರು ಕೂಡಾ ನಡೆದರು ಹಿಂದೆಯೆ ॥ ೩೩೭ ॥

ಮುದುಕರು ತದಕರು ರೋಗಿಯು ಮಾತ್ರವೆ
ಉಳಿದರು ಹಿಂದೆಯೆ ಹೋಗಲು ಆಗದೆ
ಊರಲಿ ಯಾರೂ ಕಾಣದ ಕಾರಣ
ಹಬ್ಬಿತು ಅಲ್ಲಿಯೆ ಮಸಣದ ಶಾಂತಿಯು ॥ ೨೩೮ ॥

ನೋಡಿದರೆಲ್ಲೆಡೆ ಬಾಗಿಲು ಮುಚ್ಚಿವೆ
ನಾಯಿಯು ಬೊಗಳುತ ಗೂಗೆಯು ಕೂಗುತ
ಕಾಣದು ಎಲ್ಲೆಡೆ ಊರಿನ ಸೊಬಗು
ಊರಿನ ಹೊರಗಡೆ ನಿಂತನು ರಾಮನು ॥ ೨೩೯ ॥

ಪೌರರೆ ಹಿರಿಯರೆ ಬೇಡುವೆ ನಿಮಗೆ
ಒಪ್ಪಿಗೆ ಕೊಡುವದು ಹೋಗಲು ಎಮಗೆ
ಭರತನು ಇರುವನು ಧಾರ್ಮಿಕ ತೇಜನು
ಒಪ್ಪಿರಿ ಆವನನು ಒಳ್ಳೆಯ ರಾಜನು ॥ ೨೪೦ ॥

ಎನ್ನಲಿ ತೋರುವ ನಲುಮೆಯ ಒಲುಮೆಯ
ಆವನಲಿ ತೋರಿಸಿ ಕರುಣಿಸಿರೆನ್ನನು
ದಶರಥರಾಜಗೆ ತೊಂದರೆ ಕೊಡದಲೆ
ನಡೆದರೆ ಎಲ್ಲರು ಸಂತಸ ಎನಗೆ ॥ ೨೪೧ ॥

ಆದರು ಕೇಳದೆ ಪೌರರು ಎಲ್ಲರು
ನಡೆದರು ಹಾಗೆಯೆ ರಥದ ಹಿಂದೆಯೇ
ನೋಡುತ ಈ ಸ್ಥಿತಿ ಇಳಿದನು ರಾಮನು
ಇಳಿದರು ಸೀತಾ ಲಕ್ಷ್ಮಣರೂ ಸಹ ॥ ೨೪೨ ॥

ಮೂವರು ನಡೆದರು ಪೌರರ ಜೊತೆಗೆ
ಮುಟ್ಟಿದರಾಗಲೆ ತಮಸಾ ತೀರವ
ಕಳೆದರು ಅಲ್ಲಿಯೆ ಅಂದಿನ ರಾತ್ರಿಯು
ನಗರ ನಿವಾಸಿಗಳೆಲ್ಲರ ಸಹಿತ ‖ ೩೪೩ ‖

ಬೆಳಗಿಗೆ ಮೊದಲೆ ಏಳುತ ರಾಮನು
ನೋಡಿದ ಮಲಗಿದ ಪೌರರನೆಲ್ಲರ
ಲಕ್ಷ್ಮಣ ನೋಡೆಲೊ ಪೌರರ ಸಂಕಟ
ಎಮ್ಮನು ಪೌರರು ಎದ್ದರೆ ಬಿಡರು ‖ ೩೪೪ ‖

ಹೋಗುವದೊಳ್ಳಿತು ಏಳುವ ಮೊದಲೇ
ರಥವನು ಹೂಡುತ ಹೊರಡು ಸುಮಂತ
ಬೆಳಗಿನ ಮೊದಲೇ ಹೋಗುವ ದೂರಕೆ
ತಿಳಿಯದೆ ಪೌರರು ತೆರಳಲಿ ನಗರಕೆ ‖ ೩೪೫ ‖

ಅಂತೆಯೆ ಹೊರಟರು ಕೂಡಲೆ ಅವರು
ದಾಟುತ ತಮಸಾ ನದಿಯನು ಅವರು
ಬೆಳಗಲು ಪೌರರು ಕಾಣರು ರಾಮನ
ತಿರುಗಿದರೆಲ್ಲರು ಅಳುತಲಿ ಊರಿಗೆ ‖ ೩೪೬ ‖

ಬೆಳಗಿನ ಮೊದಲೇ ಮಾಡಿದ ಪಯಣವ
ದಾಟಿದ ಕೋಸಲ ರಾಜ್ಯದ ಗಡಿಯನು
ದಾಟುತ ನದಿಯನು ವೇದಶ್ರುತಿಯನು
ಹೋಗುತ ತೆಂಕಣ ಮುಟ್ಟಿದ ಗೋಮತಿ ‖ ೩೪೭ ‖

ಸೀತೆಯೆ ತಿಳಿದಿರು ಕೋಸಲ ರಾಜ್ಯವ
ಮನುವೇ ಕೊಟ್ಟನು ಇಕ್ಷ್ವಾಕು ರಾಜಗೆ
ದಾಟುತ ರಾಜ್ಯವ ಹೋಗುತಲಿರುವೆವು
ಬರುವದು ಎಂದೋ ಸರಯೂ ತೀರಕೆ || ೨೪೮ ||

ತಿರುಗುತ ಹಿಂದಕೆ ನಮಿಸಿದ ರಾಜ್ಯಕೆ
ಹಾಗೆಯೆ ನಮಿಸುತ ಹೊರಟರು ಎಲ್ಲರು
ಬಂದರು ಎಲ್ಲರು ಗಂಗಾತೀರಕೆ
ಮೂರೂ ಲೋಕದಿ ಚಲಿಸುವ ಪಾವನಿ || ೨೪೯ ||

## ೧೪. ಬೇಡರ ದೊರೆ ಗುಹನ ಆತಿಥ್ಯ

ಗಂಗೆಯ ಬದಿಯಲಿ ಇರುವದು ಪಟ್ಟಣ
ಕರೆವರು ಅದನೇ ಶೃಂಗಿಬೇರಪುರ
ಆಳುವ ಬೇಡರ ರಾಜನು ಅದನು
ಅವನದು ಹೆಸರದು ಇರುವದು ಗುಹ ಇತಿ || ೨೫೦ ||

ಇಲ್ಲಿಯೆ ಇರುವದು ಇಂಗುದಿ ವೃಕ್ಷವು
ಕಳೆಯುವ ಈ ದಿನ ಇಲ್ಲಿಯೆ ನಾವು
ಬೇಡರ ರಾಜನು ರಾಮನ ಮಿತ್ರನು
ತಿಳಿಯಲು ಸುದ್ದಿಯು ಬಂದನು ಅಲ್ಲಿಗೆ || ೨೫೧ ||

ಬಂದರು ಜೊತೆಗೇ ಸಚಿವರು ಪೌರರು
ರಾಮನ ನೋಡುತ ಅಪ್ಪಿದ ಅವನನು
ನಾವೋ ನಿನ್ನಯ ಸೇವಕ ಜನರು
ನೀನೇ ಪ್ರಭುವು ಅನ್ಯರು ಇಲ್ಲಾ || ೨೫೨ ||

ತಿಳಿದಿರು ಊರನು ಆಯೋಧ್ಯೆಯೆಂದು
ಆಳುತ ನಮ್ಮನು ಇರು ನೀ ಇಲ್ಲಿಯೆ
ಮಾಡುತ ನಿಮ್ಮಯ ಸೇವೆಯ ನಾವು
ಕಳೆಯುತ ಮುಂದಿನ ಜೀವನ ಇಲ್ಲಿಯೆ || ೨೫೩ ||

ತಂದಿಹೆ ವಸ್ತ್ರವ ಒಡವೆಯ ಎಲ್ಲವ
ತೊಡುತಲಿ ರಾಜ್ಯವ ಆಳಿರಿ ನೀವು
ರಾಮನು ಅಂದನು ಮಿತ್ರನೆ ಶ್ರೇಷ್ಠನೆ
ಇರುವೆನು ಈಗಲೆ ತಾಪಸಿಯಂತೆಯೆ || ೨೫೪ ||

ಭೋಗದ ಮಾತೇ ಇಲ್ಲವು ಎನಗೆ
ನಿನ್ನಯ ಪ್ರೀತಿಯ ನೋಡುತ ಎನ್ನಯ
ಮನಸದು ಕರಗಿದೆ ತೃಪ್ತನು ನಾನು
ಎನ್ನುತ ರಾಮನು ಮಲಗಿದ ನೆಲದಲಿ || ೨೫೫ ||

ಲಕ್ಷ್ಮಣ ನಿಂತನು ಬಿಲ್ಲಿನ ಸಹಿತದಿ
ಗುಹನೂ ಇದ್ದನು ಲಕ್ಷ್ಮಣನೊಂದಿಗೆ
ಅಂದನು ಗುಹವರ ಲಕ್ಷ್ಮಣ ದೊರೆಯೇ
ಮಲಗೆಲೊ ನೀನೂ ಇರುವೆನು ಕಾಯಲು || ೨೫೬ ||

ಲಕ್ಷ್ಮಣನೆಂದನು ನಿದ್ದೆಯು ಬಾರದು
ತಂದೆಯು ಬದುಕನು ರಾಮನ ತೊರೆದು
ಎನ್ನಯ ಜನನಿಗೆ ತನುಜನು ಇರುವನು
ರಾಮನ ತಾಯಿಯ ನೋಡುವರಾರು || ೨೫೭ ||

ಹೀಗೆಯೆ ಹರಟುತ ಕಳೆದರು ರಾತ್ರಿಯ
ಬೆಳಗಲು ಹೇಳಿದ ಗುಹನಿಗೆ ತರಲು
ಗಂಗೆಯ ದಾಟಲು ನೌಕೆಯನೊಂದನು
ಬಂದಿತು ಕೂಡಲೆ ನೌಕೆಯು ಒಯ್ಯಲು || ೨೫೮ ||

## ೧೫. ಸುಮಂತನಿಗೆ ನಿರೋಪ

ಜೋಡಿಸಿ ಕೈಗಳ ಸುಮಂತನೆಂದನು
ರಾಮನೆ ನಾನು ಮಾಡುವದೇನು
ಕೇಳೆಲೊ ಸುಮಂತ ಶ್ರೇಷ್ಠನೆ ನೀನು
ತಂದೆಯ ತಾಯಿಯ ಕಷ್ಟವ ನೀಗಿಸು || ೨೫೯ ||

ದಶರಥರಾಜಗೆ ತಿಳಿಸೆಲೊ ನೀನು
ನನ್ನಯ ಮಾತನು ಒಂದೂ ಬಿಡದಲೆ
ಮೂವರು ನಾವೂ ಬರುವದು ನಿಶ್ಚಿತ
ಕಳೆಯುತ ವನದಲಿ ಹದಿನಾಲ್ಕು ವರುಷ || ೨೬೦ ||

ಲಕ್ಷ್ಮಣ ಸೀತೆಯು ನಾನೇ ಆಗಲಿ
ಯಾರೂ ಇಲ್ಲವು ಖಿನ್ನರು ಎಂದೂ
ನಗುತಲಿ ಇರುವೆವು ಕಾಡಲಿ ನಾವು
ಭರತನ ಕರೆಯಿಸಿ ಪಟ್ಟವ ಕಟ್ಟಿರಿ || ೨೬೧ ||

ಭರತನು ಇರುವನು ಧಾರ್ಮಿಕ ಪುರುಷನು
ತಿಳಿಸಿರಿ ಅವನಿಗೆ ರಾಜ್ಯವ ಆಳಲು
ತನ್ನಯ ಮಾತೆಯು ನೋಡುವ ಹಾಗೆಯೆ
ನೋಡಲಿ ಭರತನು ಎನ್ನಯ ಮಾತೆಯ || ೨೬೨ ||

ಹೇಳುವದೇನಿದೆ ಹೆಚ್ಚಿಗೆ ಈಗ
ಪ್ರಜೆಗಳ ತಿಳಿಯಲಿ ಮಕ್ಕಳು ಎಂದು
ಕೇಳುತ ಎಲ್ಲವ ಸುಮಂತನೆಂದನು
ಆಗದು ಊರಿಗೆ ಹೋಗಲು ಎನಗೆ ॥ ೨೬೩ ॥

ನಿನ್ನನು ಬಿಟ್ಟು ಊರಿಗೆ ಹೋಗಲಿ
ಜನರಿಗೆ ರಾಜಗೆ ಮುಖವನು ತೋರಲಿ
ನಿನ್ನಯ ಮಾತೆಯ ಎದುರಿಗೆ ಹೋಗಲಿ
ನಿನ್ನಯ ಜೊತೆಗೇ ಒಯ್ಯಲೊ ಈಗಲೆ ॥ ೨೬೪ ॥

ಇಲ್ಲದೆ ಹೋದರೆ ಸಾಯುವೆ ಉರಿಯಲಿ
ಕೇಳುತ ಈ ನುಡಿ ರಾಮನು ಅಂದನು
ಬಲ್ಲೆನು ಸುಮಂತ ನಿನ್ನಯ ಕಳವಳ
ನಿನ್ನನು ಕಳಿಸಲು ಕಾರಣವಿರುವದು ॥ ೨೬೫ ॥

ನನ್ನನು ಕಾಡಿಗೆ ಕಳಿಸಿದ ಸುದ್ದಿಯು
ತಿಳಿಯಲು ಮಾತೆಯು ಕೈಕೆಯಿ ಸಿದ್ಧಳು
ಇಲ್ಲದೆ ಹೋದರೆ ಸಂಶಯ ಪಡುವಳು
ತಂದೆಗೆ ಮೋಸದ ದೋಷವ ಕೊಡುವಳು ॥ ೨೬೬ ॥

ನಿನ್ನಯ ಸುದ್ದಿಯ ತಿಳಿಯುತ ಆಕೆಯು
ತೃಪ್ತಳು ಆಗಲಿ ಅವಳೇ ಮೊದಲು
ಈಗಲೆ ಹೊರಡುತ ರಥದಲಿ ತೆರಳು
ಮುಟ್ಟಿಸು ಎನ್ನಯ ಸುದ್ದಿಯ ಮೊದಲು ॥ ೨೬೭ ॥

ತಿರುಗುತ ಗುಹನಿಗೆ ಅಂದನು ರಾಮನು
ತಾಪಸ ಜೀವನ ಕಳೆಯುವೆ ಇನ್ನು
ತರಿಸುತ ಆಗಲೆ ಆಲದ ಹಾಲನು
ಮಾಡಿದರಾಗಲೆ ಜಟೆಯನು ಅವರು ॥ ೨೬೮ ॥

೧೬. ಗಂಗೆಯನ್ನು ದಾಟದುದು-ಸೀತೆಯ ಹರಕೆ

ಎಲ್ಲರು ಬಂದರು ಜಾಹ್ನವಿ ತೀರಕೆ
ನಮಿಸುತ ಅವಳಿಗೆ ಹತ್ತುತ ನಾವೆಯ
ನಮಿಸುತ ಗುಹನಿಗೆ ಸುಮಂತಗೆ ಕೂಡ
ಹೊರಟಿತು ನಾವೆಯು ತೇಲುತ ಆ ಕಡೆ ॥ ೨೬೯ ॥

ಬಂದಿತು ನೌಕೆಯು ಗಂಗೆಯ ಮಧ್ಯದಿ
ಜಾನಕಿ ಮುಗಿದಳು ಕೈಗಳ ಗಂಗೆಗೆ
ಜಾಹ್ನವಿ ಮಾತೆಯೆ ಹೊರಟಿಹ ಗಂಡನು
ತಂದೆಯ ವಚನವ ನಡೆಸಲು ಅವನು ॥ ೨೭೦ ॥

ಕರುಣಿಸು ತಾಯಿಯೆ ಮರಳುವ ವರೆಗೆ
ಬಂದುದು ಆದರೆ ಮೂವರು ನಾವು
ಕಳೆಯುತ ಕಾಡಲಿ ಹದಿನಾಲ್ಕು ವರುಷ
ಪೂಜಿಪೆ ನಿನ್ನನು ತಾಯಿಯೆ ನಾನು ॥ ೨೭೧ ॥

ಕೊಡುವೆನು ದಾನವ ಲಕ್ಷ ಗೋವುಗಳ
ಕೊಡುವೆನು ವಸ್ತ್ರವ ಅನ್ನವ ಜನರಿಗೆ
ಕೊಡುವೆನು ನಿನಗೂ ಮಾಂಸದ ಬಲಿಯನು
ಅಲ್ಲದೆ ಸಾಸಿರ ಮದ್ಯಕಲಶಗಳ ॥ ೨೭೨ ॥

ಮುಟ್ಟಿತು ನೌಕೆಯು ದಕ್ಷಿಣ ತೀರವ
ಇಳಿಯುತ ರಾಮನು ಅಂದನು ಲಕ್ಷ್ಮಣ
ಬಂದೆವು ಈಗಲೆ ಭೀಕರ ವನಕೆ
ಮನುಜರು ಇಲ್ಲದ ಕಾಡಿಗೆ ಬಂದೆವು ‖ ೨೭೩ ‖

ಎಚ್ಚರ ವಹಿಸುವ ರಕ್ಷಣೆ ಬೇಕಿದೆ
ಒಬ್ಬರನೊಬ್ಬರು ರಕ್ಷಿಸಬೇಕಿದೆ
ಎಲ್ಲಕು ಮುಂದೆಯೆ ನಡೆಯುತ ನೀನು
ಮಧ್ಯದಿ ಇರುವಳು ಸೀತೆಯು ತಾನು ‖ ೨೭೪ ‖

ಕೊನೆಯಲಿ ಬರುವೆನು ರಕ್ಷಿಪೆ ನಿಮ್ಮನು
ಸೀತೆಯು ತಿಳಿಯಳು ಕಾಡಿನ ಕಷ್ಟವ
ಅಂತೆಯೆ ನಡೆದರು ಮೂವರು ಅವರು
ಸುಮಂತ ನಿಂತನು ಕಾಣುವ ವರೆಗೂ ‖ ೨೭೫ ‖

**೧೭. ಕಾಡಿನಲ್ಲಿ ಮೂವರೆ ಮೊದಲನೆಯ ರಾತ್ರಿ ಕಳೆದುದು**

ಬಂದರು ನಡೆಯುತ ವತ್ಸದೇಶಕೆ
ನೋಡೆಲೊ ಲಕ್ಷಣ ಮೊದಲನೆ ರಾತ್ರಿಯು
ಕಳೆಯುತಲಿರುವೆವು ಕಾಡಿನ ಮಧ್ಯದಿ
ಮಲಗಲು ಒಣಗಿದ ಎಲೆಗಳೆ ಹಾಸಿಗೆ ‖ ೨೭೬ ‖

ಹಾಗೆಯೆ ಬಿಚ್ಚಿತು ಮನಸಿನ ಸುರುಳಿಯು
ಲಕ್ಷ್ಮಣ ತಂದೆಯ ಗತಿಯೇನಿಹುದು
ಕೈಕೆಯಿ ಸಂತಸಪಡುತಿರಬಹುದು
ರಾಜನು ಅವಳಿಗೆ ಗೊಂಬೆಯು ಮಾತ್ರವೆ ‖ ೨೭೭ ‖

ರಾಜನು ಆದನು ಕಾಮಕೆ ವಶನು
ತೊರೆದನು ಎನ್ನನು ವಿನೀತ ಪುತ್ರನ
ಭರತನು ನಿಜಕೂ ಭಾಗ್ಯಶಾಲಿಯು
ತಂದೆಯ ನಂತರ ಅವನೇ ರಾಜನು ॥ ೨೭೮ ॥

ಧರ್ಮಕೆ ಅರ್ಥಕೆ ಅರ್ಥವೆ ಇಲ್ಲಾ
ಕಾಮಕೆ ವಶವೇ ಇರುವದು ಎಲ್ಲಾ
ಕಾಮದ ಗೊಂಜಿಗೆ ದುಃಖವು ನಿಶ್ಚಿತ
ದಶರಥರಾಜನೆ ಮಾದರಿ ಅದಕೆ ॥ ೨೭೯ ॥

ಕೈಕೆಯಿ ಮನದಲಿ ಇರುವದು ಗೊತ್ತೇ
ಎನ್ನನು ಕೂಡಲೆ ಕಾಡಿಗೆ ಅಟ್ಟುತ
ದುಃಖಿದಿ ತಂದೆಯ ಮರಣದ ನಂತರ
ಭರತನ ಪಟ್ಟದ ದಾಹವು ಅವಳಿಗೆ ॥ ೨೮೦ ॥

ಸಾಧಿಸುತೆಲ್ಲವ ಸುಖದಿಂದಿಹಳು
ರಾಜ್ಯದ ಮದದಿಂ ಕಾಡದೆ ಇರುವಳೆ
ಎನ್ನಯ ಮಾತೆಯ ನಿನ್ನಯ ತಾಯಿಯ
ತಡೆಯುವರಾರದು ಕೈಕೆಯಿ ಆಟವ ॥ ೨೮೧ ॥

ಎನ್ನಯ ಕಾರಣ ನಿನ್ನಯ ತಾಯಿಯ
ಕಷ್ಟವು ಸಲ್ಲದು ಹೋಗೆಲೊ ಊರಿಗೆ
ನೋಡುತ ಇಬ್ಬರು ತಾಯಿಯರನ್ನು
ಆಗಿರು ಆಸರ ಅವರಿಗೆ ಇನ್ನು ॥ ೨೮೨ ॥

ಹೋಗುವೆ ಒಬ್ಬನೆ ಸೀತೆಯ ಜೊತೆಗೆ
ಸೇರುವೆ ದಂಡಕ ವನವನು ಒಬ್ಬನೆ
ಕೈಕೆಯಿ ಕ್ಷುದ್ರಳು ಸ್ವಾರ್ಥಿಯು ನೀಚಳು
ಹೇಸಳು ತಾಯಿಗೆ ಕಷ್ಟವ ಕೊಡಲು || ೩೮೩ ||

ತಾಯಿಯ ಕಷ್ಟವ ಊಹಿಸೆ ನಾನು
ಎನ್ನನು ಹಡೆದರು ದುಃಖವೆ ಅವಳಿಗೆ
ಬೆಳೆಸಿದಳೆನ್ನನು ಮುದ್ದಿಸಿ ಮುದ್ದಿಸಿ
ತೊರೆದೆನು ಅವಳನು ಕಷ್ಟದ ಕಾಲದಿ || ೩೮೪ ||

ತಂದೆಯು ಇದ್ದನು ಕೈಕೆಯಿ ಸಂಗದಿ
ಎನ್ನನು ನೋಡುತ ಕಳೆದಳು ಜೀವನ
ಎನ್ನನು ತೊರೆದಿಹ ತಂದೆಯು ಬದುಕನು
ತಾಯಿಗೆ ಇರುವದು ಕತ್ತಲೆ ಮಾತ್ರವು || ೩೮೫ ||

ತಾಯಿಯು ಇರುವಳು ಭಾಗ್ಯಹೀನಳು
ರಾಮನ ತಾಯಿಯು ಅನಾಥೆಯಾದಳು
ಇಂತಹ ಸಮಯದಿ ಹರಸುತ ಎನ್ನನು
ಕಾಡಿಗೆ ಕಳಿಸಲು ಒಪ್ಪಿದಳವಳು || ೩೮೬ ||

ಸಿಟ್ಟಲಿ ಅಯೋಧ್ಯೆ ಸುಡಲೂ ಬಹುದು
ಒಬ್ಬನೆ ಭೂಮಿಯ ಜಯಿಸಲೂ ಬಹುದು
ಮಾಡುವದೇನದು ವಚನದ ಪಾಲನೆ
ಧರ್ಮವ ತೊರೆಯುತ ನಡೆಯೆನು ನಾನು || ೩೮೭ ||

ಎಲ್ಲವ ಕೇಳುತ ಲಕ್ಷ್ಮಣನೆಂದನು
ಅಣ್ಣನೆ ಏನಿದು ಶೋಕದ ಒತ್ತಡ
ನಿನ್ನನು ಬಿಟ್ಟದು ಹೋಗಲು ಸಾಧ್ಯವೆ
ನಿನ್ನನು ಬಿಟ್ಟರೆ ಅಯೋಧ್ಯೆಯೆ ಕಾಡು || ೨೮೮ ||

ನಿನ್ನಯ ದುಃಖವ ನೋಡೆವು ನಾವು
ಅತ್ತಿಗೆ ನಾನೂ ಮಾಡುವದೇನದು
ನೀನೇ ಇಲ್ಲದ ಸ್ವರ್ಗವೂ ಬೇಡ
ಹರಟುತ ಹೀಗೆಯೆ ಕಳೆದರು ರಾತ್ರಿಯ || ೨೮೯ ||

## ೧೮. ಮುಂದಕ್ಕೆ ಪ್ರಯಾಣ ಆಶ್ರಮ ಸ್ಥಾಪನೆ

ಕಳೆಯುತ ರಾತ್ರಿಯ ಆಲದ ಕೆಳಗೆ
ಹೊರಟರು ಜಾವದಿ ಮುಂದಿನ ಪಯಣಕೆ
ನೋಡುತ ಹೊರಟರು ಕಾಡಿನ ಸಿರಿಯನು
ಕಂಡರು ಗಂಗೆಯ ಯಮುನೆಯ ಸಂಗಮ || ೨೯೦ ||

ರಾಮನು ಅಂದನು ಪ್ರಯಾಗ ಕ್ಷೇತ್ರವು
ಭಾರದ್ವಾಜರ ಆಶ್ರಮವಿಲ್ಲಿದೆ
ಹೋಗುತ ಅಲ್ಲಿಗೆ ನಮಿಸಿದರೆಲ್ಲರು
ತಿಳಿಸುತ ತಮ್ಮಯ ಕಥನವ ಅವರು || ೨೯೧ ||

ಸಂತಸ ಬಡುತಲಿ ಅಂದರು ಮುನಿಗಳು
ಸ್ವಾಗತವಿರುವದು ಇಲ್ಲಿಯೇ ಇರಲು
ಅಂದನು ಆಗಲೆ ರಾಮನು ಅವರಿಗೆ
ಕ್ಷಮಿಸಿರಿ ಋಷಿಗಳೆ ಹೋಗುವೆ ಬೇರೆಡೆ || ೨೯೨ ||

ಇಲ್ಲಿಗೆ ಬರುವರು ಆಯೋಧ್ಯೆಯ ಜನರು
ನೋಡಲು ಬರುವರು ಎಮ್ಮನು ಎಲ್ಲರು
ಆಗಲು ಆದುವೇ ತೊಂದರೆ ನಿಮಗೆ
ಆಶ್ರಮ ಶಾಂತಿಯು ಪೋಪುದು ಕೊನೆಗೆ || ೨೯೩ ||

ತಿಳಿಸಿರಿ ಸುಂದರ ಸ್ಥಳವನು ಒಂದನು
ಜನರಿಗೆ ಬಾರಲು ಆಗದ ತಾಣವ
ಕಳೆಯುವೆ ಅಲ್ಲಿಯೆ ತಾಪಸ ಜೀವನ
ಕ್ಷಮಿಸಿರಿ ಎನ್ನನು ಹೇಳಿದೆ ಇದ್ದುದ || ೨೯೪ ||

ಮುನಿಗಳು ಅಂದರು ಸಂತಸದಿಂದಲಿ
ಸರಿಯೇ ರಾಮನೆ ನಿನ್ನಯ ಮಾತದು
ಇಲ್ಲಿಗೆ ದೂರದಿ ಇರುವದು ಪರ್ವತ
ಹೆಸರದು ಇರುವದು ಚಿತ್ರಕೂಟ ಇತಿ || ೨೯೫ ||

ಹಿಂದಕೆ ಎಷ್ಟೋ ಋಷಿಗಳು ಮುನಿಗಳು
ಮಾಡುತ ತಪವನು ಸ್ವರ್ಗವ ಪಡೆದರು
ಇರುವದು ಒಳ್ಳೆಯ ಪುಣ್ಯದ ತಾಣವು
ಯೋಗ್ಯವು ಒಳ್ಳೆಯ ಆಶ್ರಮ ಕಟ್ಟಲು || ೨೯೬ ||

ಕಳೆಯುತ ಅಂದಿನ ರಾತ್ರಿಯ ಅಲ್ಲಿಯೆ
ಪಡೆದರು ಋಷಿಗಳ ಹರಕೆಯ ಎಲ್ಲರು
ಹೊರಟರು ಮರುದಿನ ಮುಂದಿನ ಪಯಣಕೆ
ನಡೆದರು ಸಂಗಮ ಪಶ್ಚಿಮ ದಿಕ್ಕಿಗೆ || ೨೯೭ ||

ಯಮುನಾ ನದಿಯನು ದಾಟುತ ಅವರು
ಶ್ಯಾಮಲ ವರ್ಣದ ಕಾಡಿಗೆ ಬಂದರು
ಸಲ್ಲಕಿ ಬದರೀ ಗಿಡಗಳು ತುಂಬಿವೆ
ಬಿದಿರಿನ ಮೆಳೆಗಳು ದಟ್ಟನ ವನವದು || ೧೯೮ ||

ಕಳೆದರು ಅಂದಿನ ರಾತ್ರಿಯ ಕಾಡಲಿ
ಮರುದಿನ ಬೆಳಸುತ ಪಯಣವ ಮುಂದಕೆ
ಬಂದರು ಮೆಲ್ಲಗೆ ಚಿತ್ರಕೂಟಕೆ
ಇದ್ದಿತು ಅದುವೇ ಶಾಂತಿಯ ಧಾಮವು || ೧೯೯ ||

ವಸಂತ ಋತುವದು ಇದ್ದುದು ಕಾರಣ
ಕೇಳುವದೆಲ್ಲೆಡೆ ದುಂಬಿಯ ಗಾನವು
ಕಾಣುವುವೆಲ್ಲೆಡೆ ಹೂಗಳು ಚಿಗುರು
ಗಿಡಗಳು ಹಾಡುತ ಹಕ್ಕಿಯ ಕಂಠದಿ || ೨೦೦ ||

ಭೂಮಿಯು ಉಟ್ಟಿಹ ಹಸುರಿನ ಸೀರೆಯು
ಹಚ್ಚಿದೆ ಅದರಲಿ ಹೂವಿನ ಕುಸುರನು
ಗಂಧದ ಪರಿಮಳ ತುಂಬಿವೆ ಎಲ್ಲೆಡೆ
ಮಡಿಲಲಿ ಆಡುವ ಪ್ರಾಣಿಗಳೆಷ್ಟೋ || ೨೦೧ ||

ಗಿಡಗಳು ನಿಂತಿವೆ ಫಲಗಳು ತುಂಬಿ
ಝರಿಗಳು ಹರಿಯುತ ನಾದವ ತುಂಬಿ
ಜೇನಿನ ಗೂಡಿವೆ ಮರಮರಗಳಲಿ
ತಕ್ಕುದು ಇಲ್ಲಿಯೆ ಆಶ್ರಮ ಕಟ್ಟಲು || ೨೦೨ ||

ಲಕ್ಷ್ಮಣ ಕಟ್ಟಿದ ಆಶ್ರಮವೊಂದನು
ನಂತರ ತಂದನು ಜಿಂಕೆಯ ಮಾಂಸವ
ಬಲಿಯನು ಕೊಡುತಲಿ ವಾಸ್ತುವ ತೀರಿಸಿ
ಹೊಕ್ಕರು ಮನೆಯಲಿ ಕಾಡಿನ ಮಧ್ಯದಿ ‖ ೩೦೩ ‖

— ಅಯೋಧ್ಯಾಕಾಂಡ (ಪೂರ್ವಾರ್ಧ) ಸಮಾಪ್ತ —

# ಅಯೋಧ್ಯಾಕಾಂಡ

## (ಉತ್ತರಾರ್ಧ)

ಗಂಗಾ ನದಿಯನು ದಾಟಿದ ಮೂವರು
ಕಾಡಲಿ ಮರೆಯನು ಆಗುವ ವರೆಗೂ
ನಿಂತರು ನೋಡುತ ಸುಮಂತ ಗುಹರು
ನೀರದು ತುಂಬುತ ಕಣ್ಣೇ ಕಾಣದು ‖ ೧ ‖

ಅಲ್ಲಿಯೆ ನಿಲ್ಲುತ ದೂತರ ಬಿಟ್ಟರು
ಪಡೆದರು ಅವರಿಂ ಸುದ್ದಿಯನೆಲ್ಲವ
ಚಿತ್ರಕೂಟದಲಿ ನೆಲಸಿದ ವಿಷಯವ
ಸುಮಂತ ಪಡೆಯುತ ಒಪ್ಪಿಗೆ ಗುಹನ ‖ ೨ ‖

### ೧. ಸುಮಂತನು ಅಯೋಧ್ಯೆಗೆ ಬಂದುದು

ಹೊರಟನು ರಥದಲಿ ಆಯೋಧ್ಯೆಯ ಕಡೆಗೆ
ಮುಟ್ಟಿದ ಪುರವನು ಮರುದಿನ ಸಂಜೆಗೆ
ಕಾಣದು ಎಲ್ಲಿಯೂ ಮಂಗಲ ರವವು
ಮುತ್ತಿದರೆಲ್ಲರು ಸುದ್ದಿಯ ಕೇಳಲು ‖ ೩ ‖

ರಾಮನು ಸೀತಾ ಲಕ್ಷ್ಮಣರೊಡನೆಯೆ
ದಾಟಿದರೆಲ್ಲರು ಗಂಗಾ ನದಿಯನು
ಬಿಡುತಲಿ ಅಲ್ಲಿಯೆ ಬಂದೆನು ನಾನು
ಕೇಳುತ ಎಲ್ಲವ ಅಳುತಿಹರೆಲ್ಲರು ॥ ೪ ॥

ಬೀದಿಯ ಮಧ್ಯದಿ ಹೋಗುವ ಸುಮಂತ
ಕಂಡನು ಅಲ್ಲಿಯೆ ಅಳುತಿಹ ಜನರನು
ನೋಡುತಲಿದ್ದರು ದಿಟ್ಟಿಸಿ ಅವನನು
ಮುಚ್ಚುತ ಮುಖವನು ಮುಟ್ಟಿದನರಮನೆ ॥ ೫ ॥

ಸುಮಂತ ನಮಿಸುತ ದಶರಥರಾಜಗೆ
ತಿಳಿಸಿದನವನಿಗೆ ಹೇಳಿದುದೆಲ್ಲವ
ಕೇಳುತ ದಶರಥ ಮಾತನು ಆಡನು
ಬಿದ್ದನು ನೆಲದಲಿ ಮೂರ್ಛೆಯ ಹೊಂದುತ ॥ ೬ ॥

ರಾಣಿಯರೆಲ್ಲರ ರೋದನ ತುಂಬಿತು
ಕೌಸಲ್ಯೆ ಸುಮಿತ್ರೆ ಬಂದರು ಇಬ್ಬರು
ಎತ್ತುತ ಅವನನು ಹಾಸಿಗೆ ಮೇಲೆ
ತಿಳಿಯುತ ಎಚ್ಚರ ಸುಮಂತನ ಕರೆದ ॥ ೭ ॥

ಹೇಳೆಲೊ ಮಂತ್ರಿಯೆ ಮಕ್ಕಳ ಸುದ್ದಿಯು
ನಡೆಯುತ ಹೋದರೆ ಕಾಡಲಿ ಅವರು
ಜಾನಕಿ ಕೂಡಾ ನಡೆದಳೆ ಜೊತೆಗೆ
ರಾಮನು ಲಕ್ಷ್ಮಣ ಅಂದುದು ಏನು ॥ ೮ ॥

ತಿನ್ನುವದೇನದು ಇರುವುದು ಹೇಗೆ
ಮಲಗುವದೆಲ್ಲವ ತಿಳಿಯುವ ಇಚ್ಛೆಯು
ಸುಮಂತ ಅಳುತಲಿ ಕೈಯನು ಮುಗಿಯುತ
ಅಂದನು ರಾಮನು ಧರ್ಮದ ಮೂರ್ತಿಯು ॥ ೯ ॥

೨. ರಾಮನ ಸಂದೇಶ

ಕೈಯನು ಮುಗಿಯುತ ಹೇಳಿದನವನು
ತಂದೆಯು ಪಾದಕೆ ನಮನವ ತಿಳಿಸಿರಿ
ಮಾತೆಯರೆಲ್ಲರು ಪೂಜ್ಯರು ಎನಗೆ
ಜನನಿಗೆ ತಿಳಿಸಿರಿ ನಮನವು ಎಂದು ॥ ೧೦ ॥

ತಂದೆಯು ಸೇವೆಯು ಮಾಡುತಲಿದ್ದು
ಕೈಕೆಯಿ ಮನಸಿಗೆ ನೋವನು ಮಾಡದೆ
ಭರತನು ರಾಜನು ಎಂಬುದ ತಿಳಿದು
ಗೌರವ ತೋರಿಸು ಅವನಲಿ ನೀನು ॥ ೧೧ ॥

ಭರತಗೆ ಹೇಳಿರಿ ಮಾತೆಯರೆಲ್ಲರು
ಸರಿಸಮವೆನುತಲಿ ಭೇದವ ಮಾಡದೆ
ಗೌರವ ಉಳಿಸುತ ಇಕ್ಷ್ವಾಕುವಂಶದ
ರಾಜ್ಯವ ಆಳಲಿ ಧರ್ಮನ ರೂಪದಿ ॥ ೧೨ ॥

ಕೊನೆಯಲಿ ಅಂದನು ನನ್ನನೆ ನೋಡುತ
ಸುಮಂತ ಮಂತ್ರಿಯೆ ಎನ್ನಯ ತಾಯಿಯು
ನಿನ್ನಯ ತಾಯಿಯು ಎಂದೇ ತಿಳಿದಿರು
ಹೆಚ್ಚಿಗೆ ಹೇಳುವದೇನಿದೆ ನಿಮಗೆ ॥ ೧೩ ॥

### ೩. ಲಕ್ಷ್ಮಣನ ಹೇಳಿಕೆ

ಲಕ್ಷ್ಮಣ ಹೇಳಿದ ಉರಿಯುತ ಪುಟಿದು
ತಂದೆಗೆ ಹೋಗಿದೆ ಬುದ್ಧಿಯು ಇಂದು
ರಾಜ್ಯವ ಬೇಕಿರೆ ಭರತಗೆ ಕೊಡಲಿ
ಅಣ್ಣನ ಅಡವಿಗೆ ಅಟ್ಟುವದೇತಕೆ ॥ ೧೪ ॥

ಅನುಚಿತ ಕಾರ್ಯವು ಅಲ್ಲವೆ ಇದುವು
ರಾಮನೆ ಅಣ್ಣನು ತಂದೆಯು ಎನಗೆ
ಪ್ರಭುವೂ ಅವನೇ ಬಂಧುವು ಅವನೇ
ಅವನೇ ಎಲ್ಲವು ಹೇಳುವದೇನಿದೆ ॥ ೧೫ ॥

ಜಾನಕಿ ಇದ್ದಳು ದುಃಖದ ಮೂರ್ತಿಯು
ಮಾತನು ಆಡಳು ತಿಳಿಯಳು ಏನೂ
ಕಣ್ಣಲಿ ನೀರದು ಸುರಿಯುತಲಿತ್ತು
ರಥವನು ನನ್ನನು ನೋಡುತಲಿದ್ದಳು ॥ ೧೬ ॥

ದಶರಥನೆಂದನು ಇನ್ನೂ ಹೇಳು
ಕೇಳುವ ಆಶೆಯು ತೀರದು ಎನ್ನದು
ಸುಮಂತನೆಂದನು ದಶರಥ ಕೇಳು
ಲಕ್ಷ್ಮಣ ಹೊರಟನು ಎಲ್ಲಕು ಮುಂದೆ ॥ ೧೭ ॥

ಸೀತೆಯು ಮಧ್ಯದಿ ರಾಮನು ಕೊನೆಗೆ
ಅಳುತಲೆ ಇದ್ದೆವು ಎಲ್ಲರು ನಾವು
ಕುದುರೆಯು ಕೂಡಾ ಅಳುವುದ ಕಂಡೆನು
ಉಳಿದೆವು ಕೆಲಕ್ಷಣ ಗುಹನೂ ನಾನೂ ॥ ೧೮ ॥

ಆಶೆಯು ಇದ್ದಿತು ರಾಮನ ಬಗೆಗೆ
ಎನ್ನನು ರಾಮನು ಕರೆಸಲು ಬಹುದು
ಆದರೆ ರಾಮನು ಬರಲೇ ಇಲ್ಲಾ
ಚಾರನು ತಿಳಿಸಿದ ಹೋದುದು ಎಲ್ಲಾ ॥ ೧೯ ॥

ಬರುತಲಿ ಊರಲಿ ಕಂಡೆನು ದುಃಖವ
ಎಲ್ಲರ ಕಣ್ಣೂ ಆಗಿವೆ ಕೆಂಪಗೆ
ರಾಮನ ಅಗಲಿಕೆ ಮುತ್ತಿದೆ ಎಲ್ಲರ
ಕೇಳುತ ಅಂದನು ದಶರಥ ಮೆಲ್ಲಗೆ ॥ ೨೦ ॥

### ೪. ದಶರಥನ ಸ್ಥಿತಿ

ಬಲೆಯಲಿ ಬಿದ್ದೆನು ಪಾಪಿಯು ಕೈಕಯಿ
ಕೇಳಲೆ ಇಲ್ಲಾ ಹಿರಿಯರ ಸಚಿವರ
ಜನತೆಯ ವಿಚಾರ ಮಾಡಲೆ ಇಲ್ಲಾ
ಹೋಯಿತು ವಿವೇಕ ಕವಿಯಿತು ಕತ್ತಲೆ ॥ ೨೧ ॥

ಹೆಂಗಸಿಗೋಸುಗ ಆಯಿತು ಈ ಪರಿ
ಬದುಕುವ ಇಚ್ಛೆಯು ಎನಿತೂ ಇಲ್ಲವು
ಎನ್ನನು ಒಯ್ಯುತ ರಾಮನ ತೋರಿಸು
ಇಲ್ಲವೆ ಕರೆಯಿಸು ಅವನನು ಇಲ್ಲಿಗೆ ॥ ೨೨ ॥

ಎನ್ನುತ ದಶರಥ ಉರುಳಿದ ಕೆಳಗಡೆ
ನೋಡುತ ಎಲ್ಲವ ರಾಮನ ಜನನಿಯು
ಕುಸಿದಳು ಅಲ್ಲಿಯೆ ದುಃಖದ ಭಾರದಿ
ಅಲ್ಲದೆ ಹಳಿದಳು ದಶರಥರಾಜನ ॥ ೨೩ ॥

ಅಂದಳು ರಾಜಗೆ ರಾಣಿಯು ಈ ಪರಿ
ನಿನ್ನಯ ಕೆಲಸವು ದುಃಖದ ಮೂಲವು
ರಾಜ್ಯವು ಜನತೆಯು ದುಃಖದ ಕೋಡಿಯು
ಕೈಕೆಯಿ ಭರತನು ಇಬ್ಬರೆ ಸುಖಿಗಳು ॥ ೨೪ ॥

## ೫. ಶ್ರವಣಕುಮಾರನ ಕಥೆ

ಕೇಳಿದ ಎಲ್ಲವ ದುಃಖವ ತುಂಬಿ
ನೆನಪಿಗೆ ಬಂದಿತು ಹಿಂದಿನ ಕತೆಯು
ಕೇಳಲೆ ರಾಣಿಯೆ ಕರ್ಮದ ಮರ್ಮವ
ಆಗಿದೆ ಇದುವೆ ಶಾಪದ ಫಲವು ॥ ೨೫ ॥

ಕರ್ಮದ ಫಲವನು ತಿಳಿಯದೆ ಮಾಡಿದ
ಕಾರ್ಯವು ಎಲ್ಲವು ವಿಫಲವು ನೋಡು
ಬೇವಿನ ಬೀಜವ ಊರುತ ನಾನು
ಮಾವಿನ ಹಣ್ಣನು ಹೊಂದಲು ಸಾಧ್ಯವೆ ॥ ೨೬ ॥

ಅಂತೆಯೆ ಆಗಿದೆ ಎನ್ನಯ ಗತಿಯೂ
ರಾಣಿಯೆ ಕೇಳಲೆ ಎನ್ನಯ ಕತೆಯನು
ಇದ್ದೆನು ಆಗಲೆ ಹರೆಯದ ಹುಡುಗನು
ಇದ್ದೆನು ನಾನೂ ಶಬ್ದವೇಧಿಯೂ ॥ ೨೭ ॥

ಕಣ್ಣನು ಮುಚ್ಚುತ ಸಪ್ಪಳ ಕೇಳುತ
ಬಿಟ್ಟರೆ ಬಾಣವ ತಪ್ಪದು ಗುರಿಯನು
ಒಂದಿನ ಇದ್ದಿತು ವರ್ಷಾಕಾಲವು
ಅಂದಿನ ರಾತ್ರಿಯೆ ಹೊರಟೆನು ಬೇಟೆಗೆ ॥ ೨೮ ॥

ಎತ್ತಲು ನೋಡಲು ಕತ್ತಲೆ ಮುಚ್ಚಿದೆ
ಮಳೆಯದು ಆಗಲೆ ನಿಂತಿದೆ ಸುರಿದು
ಹಾದಿಯಲೆಲ್ಲೆಡೆ ನೀರೇ ನೀರು
ಎನಗದು ಏಕೋ ಬೇಟೆಯ ಹಂಬಲ || ೨೯ ||

ಕುಡಿಯಲು ಬರುತಿಹ ಕಾಡಿನ ಕೋಣವ
ಆನೆಯ ಹುಲಿಗಳ ಕೊಲ್ಲುವ ಇಚ್ಛೆಯು
ಕುಳಿತೆನು ಒಂದೆಡೆ ಕಾಯುತ ದಾರಿಯ
ಕೇಳಿತು ಸಪ್ಪಳ ಘುಳುಘುಳು ಎಂದು || ೩೦ ||

ತಿಳಿದೆನು ಸಪ್ಪಳ ಆನೆಯ ಕುಡಿತವು
ಕಣ್ಣಿಗೆ ಕಾಣದು ಏನೂ ಒಂದೂ
ಪರಿಕಿಸಿ ಕೇಳಿದೆ ಸಪ್ಪಳವನ್ನೂ
ಬಿಟ್ಟೆನು ಬಾಣವ ಸಪ್ಪಳದೆಡೆಗೆ || ೩೧ ||

ಕೇಳಿದೆ ಕೂಡಲೆ ಮಾನವ ಧ್ವನಿಯನು
ಅಯ್ಯೋ ಎನ್ನುತ ಉರುಳಿದ ಸಪ್ಪಳ
ತಿಳಿದೆನು ಆಯಿತು ಘೋರ ಪ್ರಮಾದವು
ಓಡಿದೆನಲ್ಲಿಗೆ ನೋಡಿದೆ ತಾಪಸಿ || ೩೨ ||

ಸಂಕಟಪಡುತಲಿ ಬಿದ್ದೆನು ಕಾಲಿಗೆ
ಕ್ಷಮಿಸಿರಿ ಎನ್ನನು ಮುನಿವರ ತಾಪಸಿ
ತಿಳಿಯದೆ ಆದುದು ದಂಡಿಸಿ ಸಿದ್ಧನು
ಕೇಳುತ ನನ್ನನು ಅಂದನು ಅವನು || ೩೩ ||

ಎನ್ನಯ ಸಾವಿನ ಚಿಂತೆಯು ಇಲ್ಲಾ
ತಂದೆಯು ತಾಯಿಯು ಕುಳಿತಿಹರಲ್ಲಿ
ನೀರನು ಕುಡಿಯಲು ಕಾತರರಾಗಿ
ಮುದುಕರು ಇಬ್ಬರು ಕುರುಡರು ಇರುವರು || ೩೪ ||

ನಡೆಯದು ಆಗದು ಬುಟ್ಟಿಯಲಿಹರು
ಹೊರುತಲಿ ಅವರನು ತಿರುಗುವೆ ನಾನು
ಈಗಲೆ ಹೋಗುತ ನೀರನು ಕೊಡು ನೀ
ಎನ್ನಯ ಮರಣದ ಸುದ್ದಿಯ ತಿಳಿಸುತ || ೩೫ ||

ಬಾಣದ ಉರಿಯನು ತಡೆಯೆನು ನಾನು
ಕೇಳುತ ಬಾಣವ ಶಾಂತಿಯ ನೀಡು
ಎಳೆಯುವೆ ಉಸಿರನು ಕೊನೆಯದು ಈಗಲೆ
ಮಾತಾಪಿತರನು ರಕ್ಷಿಸು ನೀನೇ || ೩೬ ||

ಕೇಳುತ ಬಾಣವ ತೆಗೆದೆನು ಹೊರಗೆ
ರಕ್ತವು ಪುಟಿಯಿತು ಚಿಮ್ಮುತ ಹೊರಗಡೆ
ಬಿಟ್ಟನು ಅಸುವನು ನೋಡುತ ಎದುರಿಗೆ
ಪಾಪವು ಮುತ್ತಿತು ಎನ್ನನು ಆಗಲೆ || ೩೭ ||

ಓಡಿದೆ ಕೊಡಲೆ ನೀರಿನ ಸಹಿತ
ಮುಟ್ಟಿದೆ ಪಾದವ ಮಾತಾಪಿತರದು
ಅಂಧರು ಇಬ್ಬರು ಕಾಣದು ಏನೂ
ಮಾತನು ಆಡದೆ ಕೊಟ್ಟೆನು ನೀರನು || ೩೮ ||

ಏಕಿದು ಮಗುವೇ ಸುಮ್ಮನೆ ಇರುತಿಹೆ
ತಡವದು ಏಕೋ ಆಯಿತು ಬಹಳ
ಆದರು ಕೂಡಾ ಮಾತನು ಆಡದೆ
ನಿಂತೆನು ಹಾಗೆಯೆ ಸುಮ್ಮನೆ ಎದುರಿಗೆ ॥ ೩೯ ॥

ಏನಿದು ಮಗುವೇ ಮಾತನು ಆಡು
ತೊಂದರೆಯಾದರು ಆಗಿದೆ ಏನು
ಮಾತನು ಆಡದೆ ಇದ್ದರೆ ನೀನು
ಕುಡಿಯೆವು ನೀರನು ಎಂದಿಗೂ ನಾವು ॥ ೪೦ ॥

ಕೇಳುತ ಮಾತನು ಹೇಳಿದೆ ನಾನು
ಸರಯೂ ತೀರದಿ ಕೊಂದುದು ಕುವರನ
ತಿಳಿಯದೆ ಮಾಡಿದ ತಪ್ಪನು ಒಪ್ಪುತ
ಬೇಡಿದೆ ಕ್ಷಮಿಸಲು ದೀನನು ಆಗುತ ॥ ೪೧ ॥

ಇರುವೆನು ದಶರಥ ರಾಜನು ನಾನು
ಮಾಡುವೆ ನಿಮ್ಮಯ ಸೇವೆಯ ಇನ್ನು
ನೋಡುವೆ ನಿಮ್ಮನು ಪಿತರುಗಳೆಂದೇ
ಕ್ಷಮಿಸಿರಿ ಎನ್ನನು ಮನ್ನಿಸಿ ತಪ್ಪನು ॥ ೪೨ ॥

ಚೆಲ್ಲುತ ನೀರನು ಕುಡಿಯದೆ ಇಬ್ಬರು
ಅಂದರು ಎನಗೇ ಒಯ್ಯಲು ಅಲ್ಲಿಗೆ
ಮುಟ್ಟುತ ಮಗನನು ಜೀವವ ಬಿಡುವೆವು
ಮುಟ್ಟಿಸು ನಮ್ಮನು ಬಿದ್ದಿಹ ಸ್ಥಳಕೆ ॥ ೪೩ ॥

ಕೂಡಲೆ ಒಯ್ದೆನು ಅವರಿಬ್ಬರನೂ
ಅಳುತಲಿ ಇಬ್ಬರು ಮುಟ್ಟುತ ಮಗನನು
ದೇಹವ ಸವರುತ ದುಃಖವು ತುಂಬಿರೆ
ದಶರಥರಾಜನೆ ಕೇಳೆಲೊ ನೀನು ॥ ೪೪ ॥

ಮುಪ್ಪಿನ ಕಾಲದಿ ಮಗನನು ಕಳೆದಿಹೆ
ದುಃಖವ ತಡೆಯದೆ ಮರಣವ ಹೊಂದುವೆ
ನಿನ್ನಯ ಅಂತ್ಯವು ಹೀಗೆಯೆ ಆಗಲಿ
ಕುವರನ ಅಗಲಿಕೆ ಮರಣವನೊಡ್ಡಲಿ ॥ ೪೫ ॥

ತಿಳಿಯಲಿ ನಿನಗೂ ಮಕ್ಕಳ ಅಗಲಿಕೆ
ಇರುವದು ಎಂತಹ ಯಾತನೆ ಅದರಲಿ
ಸಾಯುವೆ ನೀನೂ ಮಕ್ಕಳ ಕಾಣದೆ
ಎನುತಲಿ ಬಿಟ್ಟರು ಅಸುವನು ಇಬ್ಬರು ॥ ೪೬ ॥

ಅಂದಿನ ಶಾಪವು ಫಲಿಸಿದೆ ಇಂದು
ಬಂದರೆ ರಾಮನು ಉಳಿಯುವೆ ನಾನು
ಕಾಣದೆ ಕಣ್ಗಳು ಆಗಿವೆ ಮಂಜು
ಎಣ್ಣೆಯು ತೀರಿದ ಬತ್ತಿಯು ನಾನು ॥ ೪೭ ॥

ರಾಮನೆ ರಾಮನೆ ಎಲ್ಲಿಹೆ ನೀನು
ಎನ್ನಯ ತಪ್ಪನು ಮನ್ನಿಸು ಕುವರನೆ
ಎನ್ನುತ ರಾಜನು ಬಿದ್ದನು ಕೆಳಗಡೆ
ಎತ್ತುತ ನೋಡಲು ಉಸಿರೇ ಇಲ್ಲಾ ॥ ೪೮ ॥

ರಾತ್ರಿಯ ಸಮಯದಿ ಗತಿಸಿದ ರಾಜನು
ಸುದ್ದಿಯು ಹಬ್ಬಿತು ಬೆಳಗುವ ಮೊದಲೇ
ಅರಮನೆ ಮುಳಗಿತು ಅಳುವಿನ ಗೋಳಲಿ
ಪೌರರು ಬಂದರು ಗಾಬರಿಯಾಗುತ ॥ ೪೯ ॥

ಸಾಯುವ ಸಮಯದಿ ಮಕ್ಕಳು ಇಲ್ಲಾ
ಮಕ್ಕಳು ಇಲ್ಲದೆ ಸಂಸ್ಕಾರವಿಲ್ಲ
ಇಟ್ಟರು ದೇಹವ ಎಣ್ಣೆಯ ಒಳಗಡೆ
ಕಾಯಲು ಭರತನು ಮರಳುವ ವರೆಗೆ ॥ ೫೦ ॥

### ೬. ವಸಿಷ್ಠ ಋಷಿಗಳು ಭರತನನ್ನು ಕರೆಯಲು ಕಳುಹಿಸಿದುದು

ವಸಿಷ್ಠ ಋಷಿಗಳು ಕರೆದರು ಪೌರರ
ರಾಜನು ಇಲ್ಲದ ರಾಜ್ಯಕೆ ಕೇಡಿದೆ
ರಾಮಲಕ್ಷ್ಮಣರು ಹೋದರು ಕಾಡಿಗೆ
ಭರತನ ಕರೆಸುವದೊಂದೇ ಮಾರ್ಗವು ॥ ೫೧ ॥

ಒಪ್ಪಿಗೆ ಪಡೆಯುತ ಪೌರರ ಹಿರಿಯರ
ಕಳಿಸಿದರಾಗಲೆ ಕುದುರೆಯ ದೂತರ
ಹೇಳಿದರವರಿಗೆ ತಿಳಿಸದೆ ಒಂದೂ
ತನ್ನಿರಿ ಭರತನ ಇಲ್ಲಿಗೆ ತ್ವರದಲಿ ॥ ೫೨ ॥

ರಾಮನ ಕಾಡಿನ ಸುದ್ದಿಯ ಹೇಳದೆ
ದಶರಥರಾಜನ ಮರಣವ ತಿಳಿಸದೆ
ಸುಮ್ಮನೆ ಹೇಳಿರಿ ಈಗಲೆ ಬರಲು
ವಸಿಷ್ಠ ಋಷಿಗಳು ಕರೆದರು ಎಂದು ॥ ೫೩ ॥

ಹೋದರು ದೂತರು ವೇಗದಿ ಕೂಡಲೆ
ನಿಲ್ಲದೆ ಎಲ್ಲಿಯು ಮುಟ್ಟಿದರವರು
ರಾಜಗೃಹವನು ಕೇಕಯ ರಾಜನ
ಕರೆವರು ಪುರವನು ಗಿರಿವ್ರಜವೆಂದು || ೫೪ ||

## ೭. ಭರತನ ಕನಸು

ಅಂದಿನ ರಾತ್ರಿಯ ಬೆಳಗಿನ ಸಮಯದಿ
ಭರತನು ಕಂಡನು ಕೇಡಿನ ಕನಸನು
ಮನಸದು ಆಯಿತು ಚಂಚಲ ದುಃಖಿತ
ಗೆಳೆಯರ ಎದುರಿಗೆ ಹೇಳಿದ ಅದನು || ೫೫ ||

ಸ್ವಪ್ನದಿ ಕಂಡೆನು ತಂದೆಯ ಬಗೆಯನು
ಚಿಂದಿಯನುಡುತಲಿ ಬೆಟ್ಟದ ತುದಿಯಿಂ
ಬಿದ್ದನು ಗೊಬ್ಬರಗುಂಡಿಯ ಒಳಗೆ
ಅಲ್ಲಿಯೆ ಈಜುತ ಬರುತಲಿ ಹೊರಗಡೆ || ೫೬ ||

ಎಣ್ಣೆಯ ಕುಡಿದನು ಬೊಗಸೆಯ ತುಂಬುತ
ತಲೆಯನು ಬಗ್ಗಿಸಿ ಎಳ್ಳನು ತಿನ್ನುತ
ಎಣ್ಣೆಯ ಸವರುತ ಮೈಯಲಿ ಎಲ್ಲಾ
ಧುಮಕಿದ ಎಣ್ಣೆಯ ಕುಂಡದ ಒಳಗೆ || ೫೭ ||

ಸಮುದ್ರವೆಲ್ಲವು ಬತ್ತಿದ ಕಂಡೆ
ಚಂದ್ರನು ಭೂಮಿಗೆ ಬಿದ್ದುದ ಕಂಡೆ
ಪಟ್ಟದ ಆನೆಯು ಸತ್ತುದ ಕಂಡೆ
ಉರಿಯುವ ಅಗ್ನಿಯು ಆರಿದ ಕಂ || ೫೮ ||

ಭೂಮಿಯು ಕುಸಿಯಿತು ಒಳಗಡೆ ಕೆಳಗಡೆ
ಮರಗಳು ಒಣಗುತ ಬೆಟ್ಟವು ಉರಿಯುತ
ತಂದೆಯು ಕಬ್ಬಿಣ ಪೀಠದಿ ಕುಳಿತಿಹ
ಕಪ್ಪುಬಟ್ಟೆಯನು ಹೊದೆದುದ ಕಂಡೆ ॥ ೫೯ ॥

ಕೆಂಪಿನ ಹೂಗಳ ಮಾಲೆಯು ಧರಿಸುತ
ಕತ್ತೆಯ ಹೂಡಿದ ರಥವನು ಏರುತ
ದಕ್ಷಿಣ ದಿಕ್ಕಿಗೆ ಹೋಗುವ ತಂದೆಯ
ರಾಕ್ಷಸಿಯೊಬ್ಬಳು ಎಳೆವುದ ಕಂಡೆ ॥ ೬೦ ॥

ಮರಣವು ಕಾದಿದೆ ಯಾರಿಗೊ ಏನೋ
ಇಂತಹ ಕನಸನು ಎಂದೂ ಕಾಣೆನು
ಮನದಲಿ ದುಗುಡವು ಹೆಚ್ಚಿದೆ ಇನ್ನೂ
ಕಾದಿದೆ ಏನೋ ತಿಳಿಯೆನು ನಾನು ॥ ೬೧ ॥

## ೬. ಅಯೋಧ್ಯೆಯಿಂದ ದೂತರು ಬಂದುದು

ಆಗಲೆ ಬಂದರು ಕುದುರೆಯ ದೂತರು
ಸುದ್ದಿಯ ತಂದರು ಅಯೋಧ್ಯೆಯಿಂದಲಿ
ರಾಜನ ಕುವರನೆ ಮಂತ್ರಿಗಳೆಲ್ಲಾ
ಕೇಳುತ ನಿನ್ನಯ ಕುಶಲವ ಎಲ್ಲಾ ॥ ೬೨ ॥

ಊರಲಿ ಕಾದಿವೆ ಕೆಲಸವು ನಿಮಗೆ
ಈಗಲೆ ಹೊರಡಲು ತಿಳಿಸಿದರವರು
ರತ್ನವ ತಂದಿವೆ ಮೂವತ್ತು ಕೋಟಿ
ಕೊಡಿಸಿರಿ ಕಾಣಿಕೆ ರಾಜಗೆ ಕುವರಗೆ ॥ ೬೩ ॥

ಸಂತಸದಿಂದಲಿ ಕೊಡಿಸಿದ ಅಜ್ಜಗೆ
ಸೋದರಮಾವಗೆ ಯುಧಾಜಿತನಿಗೆ
ಭರತನು ಕೇಳಿದ ದೂತರನೆಲ್ಲರ
ತಂದೆಯು ಕುಶಲದಿ ಇರುವನೆ ಚಾರರೆ ॥ ೬೪ ॥

ರಾಮನು ಲಕ್ಷ್ಮಣ ಕ್ಷೇಮದಿ ಇರುವರೆ
ಹಿರಿಯರು ಮಾತೆಯರಿಬ್ಬರು ಕ್ಷೇಮವೆ
ಅಲ್ಲದೆ ಎನ್ನಯ ಜನನಿಯು ಕುಶಲವೆ
ದೂತರು ಅಂದರು ಎಲ್ಲವು ಕುಶಲವು ॥ ೬೫ ॥

## ೯. ಭರತನ ಪ್ರಯಾಣ

ಹೊರಡಲಿ ಈಗಲೆ ನಿನ್ನಯ ರಥವು
ಕೇಕಯ ರಾಜನ ಅಪ್ಪಣೆ ಪಡೆಯುತ
ಭರತನು ಏರಿದ ಆಗಲೆ ರಥವನು
ಜೊತೆಗೇ ಹೊರಟನು ಶತ್ರುಘ್ನನು ಸಹ ॥ ೬೬ ॥

ಭರತನ ಜೊತೆಗೇ ಹೊರಟಿತು ಸೈನ್ಯವು
ಅಲ್ಲದೆ ಆನೆಯು ಹಯಗಳು ರಥಗಳು
ಅಜ್ಜನು ಕೊಟ್ಟಿಹ ಕಾಣಿಕೆ ಎಲ್ಲವು
ಭರತನು ನಡೆದನು ಎಲ್ಲಕು ಮುಂದೆ ॥ ೬೭ ॥

ಮಾರ್ಗವ ಸಾಗಲು ಆಗದು ಈ ಪರಿ
ವೇಗದ ಕುದುರೆಯ ರಥವನು ಏರಿದ
ಸೈನ್ಯಕೆ ಹೇಳಿದ ಬನ್ನಿರಿ ಮೆಲ್ಲಗೆ
ಹೋಗುವೆ ಓರ್ವನೆ ಮುಂದಕೆ ಊರಿಗೆ ॥ ೬೮ ॥

೧೦. ಭರತನು ಕಂಡ ಅಯೋಧ್ಯೆ

ಭರತನು ಕಂಡನು ದೂರದಿ ಅಯೋಧ್ಯೆ
ಏನಿದು ಊರಲಿ ಸಂತಸ ಕಾಣದು
ಮೃದಂಗ ಭೇರಿಯ ಸಪ್ಪಳ ಕೇಳೆನು
ವೀಣೆಯ ಗಾನದ ರವವೇ ಇಲ್ಲಾ ॥ ೧೯ ॥

ಉದ್ಯಾನ ವನಗಳು ಬರಿದಾಗಿರುವವು
ನೋಡುತ ಎನ್ನನು ಚಾರರು ಪೌರರು
ಮುಚ್ಚುತ ತಮ್ಮಯ ಬಾಗಿಲು ಎದುರಲಿ
ಮುಖವನು ತೋರರು ಒಬ್ಬರು ಎನಗೆ ॥ ೨೦ ॥

ಮನೆಗಳ ಅಂಗಳ ಗುಡಿಸಿಯೇ ಇಲ್ಲಾ
ಜನತೆಯ ಮೊಗದಲಿ ಕಳೆಯೇ ಇಲ್ಲಾ
ಇಂತಹ ಊರನು ನೋಡಿಯೆ ಇಲ್ಲಾ
ಕಾರಣವೇನದು ಹೇಳೆಲೊ ಸಾರಥಿ ॥ ೨೧ ॥

ತಂದೆಯ ಭವನದಿ ತಂದೆಯ ಕಾಣದೆ
ಭರತನು ಬಂದನು ಜನನಿಯ ಕಡೆಗೆ
ತಾಯಿಯ ಪಾದಕೆ ನಮಿಸುತ ಅವನು
ಕಂಡನು ತಾಯಿಯ ಸಂತಸ ಮುಖವನು ॥ ೨೨ ॥

ಕಳೆಯುತ ರಾತ್ರಿಗಳೇಳನು ನಾನು
ಬಂದೆನು ಮುಂದೆಯೆ ಎಚ್ಚರಕಿಂತಲು
ಎಲ್ಲಿಹ ತಂದೆಯು ನಮಿಪೆನು ಅವನಿಗೆ
ಸೇವಕರಾರೂ ತಿಳಿಸರು ಎನಗೆ ॥ ೨೩ ॥

## ೧೧. ಕೈಕೇಯಿಯು ಹೇಳಿಕೆ

ಕೈಕೆಯಿ ಅಂದಳು ಕೇಳಿಲೊ ಮಗುವೇ
ಹುಟ್ಟಿದ ಮನುಜಗೆ ಮರಣವು ನಿಶ್ಚಿತ
ಹೊಂದಿದ ತಂದೆಯು ಕೊನೆಯದು ಗತಿಯನು
ಕೇಳುತ ಸುದ್ದಿಯ ಬಿದ್ದನು ಭರತನು ॥ ೭೪ ॥

ಎಚ್ಚರ ತಿಳಿಯುತ ಭರತನು ಕೇಳಿದ
ತಂದೆಗೆ ಕಾಯಿಲೆ ಆಯಿತು ಏನು
ಮೊದಲೇ ಎನಗೂ ತಿಳಿಸಲು ಬಾರದೆ
ಅಂದಳು ತಾಯಿಯು ಮಗನಿಗೆ ಆಗಲೆ ॥ ೭೫ ॥

ರಾಮನು ಲಕ್ಷ್ಮಣ ಜಾನಕಿ ಸಹಿತದಿ
ಹೋದನು ಕಾಡಿಗೆ ನಾರನು ಉಡುತಲಿ
ತಡೆಯದೆ ರಾಮನ ಅಗಲಿಕೆ ದಶರಥ
ಹೊಂದಿದ ಗತಿಯನು ಮಾಡುವುದೇನು ॥ ೭೬ ॥

ಬೆಚ್ಚುತ ಕೇಳಿದ ಭರತನು ತಾಯಿಗೆ
ಕಾಡಿಗೆ ಮೂವರು ಹೋದುದು ಏಕೆ
ತಪ್ಪದು ಯಾವದು ಶಿಕ್ಷೆಯು ಈ ಪರಿ
ನಾರನು ಉಡಿಸುತ ಕಳಿಸಿದುದೇಕೆ ॥ ೭೭ ॥

ಕೈಕೆಯಿ ಅಂದಳು ತಲೆಯನು ಸವರುತ
ರಾಮನು ಲಕ್ಷ್ಮಣ ಸೀತೆಯು ಕೂಡಾ
ಮಾಡದೆ ಹೋದರು ತಪ್ಪನು ಒಂದೂ
ರಾಜ್ಯದ ಕುಟಿಲತೆ ತಿಳಿಯದು ನಿನಗೆ ॥ ೭೮ ॥

ರಾಮುಗೆ ಪಟ್ಟವ ಕಟ್ಟುತಲಿದ್ದರು
ತಡೆಯುತ ನಾನೇ ಅಟ್ಟಿದೆ ಕಾಡಿಗೆ
ದಶರಥರಾಜನ ವಚನದ ಕಾರಣ
ವಚನವ ನಡೆಸಲು ಹೊರಟರು ಕಾಡಿಗೆ ‖ ೭೯ ‖

ಪಟ್ಟವು ಕಾದಿದೆ ನಿನಗಾಗಿಯೆಂದು
ರಾಜನು ಆಗುತ ಸುಖವಾಗಿ ಬಾಳು
ಕಂಟಕ ಎಲ್ಲವ ಕಳೆದಿಹೆ ನಾನು
ತಂದೆಯ ಕರ್ಮವ ಬೇಗನೆ ಮುಗಿಸು ‖ ೮೦ ‖

## ೧೧. ಭರತನ ಉತ್ತರ

ತಾಯಿಯೆ ಏನಿದು ನಾಚಿಕೆ ಬಾರದೆ
ತಂದೆಯ ಮರಣಕೆ ಕಾರಣವಾದೆಯೆ
ಅಣ್ಣನು ನನಗೂ ತಂದೆಯ ಸರಿಸಮ
ಅವನಲಿ ಗೌರವ ಎನ್ನದು ತಿಳಿಯದೆ ‖ ೮೧ ‖

ರಾಜ್ಯವ ಆಳಲು ಹಿರಿಯನೆ ಬಾಧ್ಯನು
ಅಲ್ಲದೆ ಅವನೇ ಎಲ್ಲರ ಕಣ್ಮಣಿ
ಧರ್ಮದ ಮೂರ್ತಿಯು ದೇಶದ ಕೀರ್ತಿಯು
ಅಲ್ಲದೆ ವೀರನು ಶೂರನು ಧೀರನು ‖ ೮೨ ‖

ಎಮ್ಮಯ ವಂಶದ ಕೀರ್ತಿಯ ಅಳಿಸಿದೆ
ಜಗದಲಿ ಜನರಿಗೆ ಕಾಣುವದೇನದು
ಆದೆನು ನಾನೂ ರಾಜ್ಯದ ಲೋಭಿಯು
ಕಾಣುವೆ ವೈರಿಯ ತಾಯಿಯ ರೂಪದಿ ‖ ೮೩ ‖

ರಾಕ್ಷಸಿ ರೂಪದ ತಾಯಿಯೆ ಕೇಳು
ತಂದೆಯು ಸತ್ತನು ನಿನ್ನಯ ಕಾರಣ
ರಾಮನು ಹೋದನು ಲಕ್ಷ್ಮಣ ಹೋದನು
ಹೋಯಿತು ಪ್ರೀತಿಯು ಜನತೆಯ ಎಲ್ಲರ ॥ ೮೪ ॥

ಮಾತೆಯರಿಬ್ಬರು ನಂಬರು ಎನ್ನನು
ಕರೆಯುವರೆಲ್ಲರು ಲೋಭಿಯು ಎಂದು
ಇದುವೇ ನಿನ್ನಯ ಪಾಪದ ಫಲವಿದೆ
ಭೋಗಿಸಲಾರೆನು ಎಂದಿಗು ನಾನು ॥ ೮೫ ॥

ಹೋಗುವೆ ಕೂಡಲೆ ಕಾಡಿಗೆ ನಾನು
ಕರೆಯುತ ರಾಮನ ಪಟ್ಟವ ಕಟ್ಟುವೆ
ಆಗುವೆ ಎಂದಿಗು ರಾಮನ ಸೇವಕ
ಕಳೆಯುವೆ ಜೀವನ ರಾಮನ ದಾಸನು ॥ ೮೬ ॥

೧೨. ಭರತನು ಕೌಸಲ್ಯೆಯ ಕಡೆಗೆ ಬಂದುದು

ಕೇಳುತ ಸುದ್ದಿಯ ಭರತನ ಬರುವಿನ
ಕಾಣಲು ಹೊರಟಳು ಕೌಸಲ್ಯೆ ಆಗ
ಕರೆದಳು ಸಂಗಡ ಸುಮಿತ್ರೆಯ ಕೂಡ
ಆಗಲೆ ಬಂದನು ಭರತನು ಅಲ್ಲಿಗೆ ॥ ೮೭ ॥

ಸಂಗಡ ಇದ್ದನು ಶತ್ರುಘ್ನ ಕೂಡ
ನೋಡುತ ಭರತನ ಕುಸಿದಳು ಅಲ್ಲಿಯೆ
ಉಕ್ಕಿತು ದುಃಖವು ಬಿಕ್ಕುತ ಅಂದಳು
ಬಾರೆಲೊ ಭರತನೆ ಪಟ್ಟವ ಏರಲು ॥ ೮೮ ॥

ನೋಡುತ ಕಾರ್ಯವ ನಿನ್ನಯ ಜನನಿಯು
ಸುಖಿಸುತ ರಾಜ್ಯವ ಆಳಿಲೊ ನೀನು
ರಾಜ್ಯವು ಬೇಕಿರೆ ಆಳಿಲೊ ರಾಜ್ಯವ
ಎನ್ನಯ ರಾಮನು ಕಾಡಿಗೆ ಏಕೆ || ೮೯ ||

ನಾರನು ಉಡಿಸುವ ಹಟವದು ಏಕೆ
ತಾಪಸ ವೇಷವ ಧರಿಸುವದೇಕೆ
ಕಳೆವದು ಜೀವನ ಕಾಡಲಿ ಏಕೆ
ರಾಮನು ಇಲ್ಲಿಯೆ ಇದ್ದರೆ ಆಗದೆ || ೯೦ ||

ನೋಡುವೆ ಮುಖವನು ದಿನದಲಿ ಒಮ್ಮೆಯೆ
ಹಿಡಿಯುವೆ ಜೀವವ ಮುಖವನು ನೋಡುತ
ಇಲ್ಲವೆ ಎನ್ನನು ಕಾಡಿಗೆ ಕಳಿಸುತ
ಮಾಡೆಲೊ ರಾಜನೆ ಉಪಕಾರವೆನಗೆ || ೯೧ ||

ಕೇಳುತ ಶೋಕವ ದುಃಖವ ತಡೆಯದೆ
ಬಿದ್ದನು ಭರತನು ಮಾತೆಯ ಪಾದದಿ
ತಿಳಿಯುತ ಎಚ್ಚರ ಅಂದನು ಮಾತೆಗೆ
ಮಾತೆಯೆ ಹೇಳುವೆ ಆಣೆಯ ಮಾಡುತ || ೯೨ ||

ಅಣ್ಣಗೆ ದ್ರೋಹವ ಮಾಡೆನು ಎಂದೂ
ತಂದೆಯ ಸರಿಸಮ ತಿಳಿದಿಹೆ ನಿಜಕೂ
ನಿನ್ನಯ ಪಾದದ ಆಣೆಯು ತಾಯಿಯೆ
ಕನಸಲಿ ಮನಸಲಿ ಚಿಂತಿಸೆ ಆದನು || ೯೩ ||

ಅನ್ನುತ ಅನ್ನುತ ಪ್ರಜ್ಞೆಯು ತಪ್ಪಿತು
ಬಿದ್ದನು ಭರತನು ತಾಯಿಯ ಮುಂದೆಯೆ
ತಾಯಿಯ ಮನಸದು ಮೆತ್ತಗೆ ಆಯಿತು
ಹಿಡಿಯುತ ಭರತನ ಭೋರನೆ ಅತ್ತಳು || ೯೪ ||

ಕಳೆಯಿತು ಆ ದಿನ ರಾತ್ರಿಯು ಹಾಗೆಯೆ
ಮರುದಿನ ತೆಗೆದರು ರಾಜನ ದೇಹವ
ಮಾಡುತ ಕರ್ಮವ ಶಾಸ್ತ್ರದ ಬಗೆಯಲಿ
ಮುಗಿಸಿದ ಭರತನು ತಂದೆಯ ಕರ್ಮವ || ೯೫ ||

ಶ್ರಾದ್ಧವ ಮಾಡುತ ತರ್ಪಣ ಕೊಡುತಲಿ
ದಾನವ ಮಾಡಿದ ಅನ್ನವ ನೀಡಿದ
ಮುಗಿಯಿತು ಕರ್ಮವು ಬಂದಿತು ದಿನವದು
ಇದ್ದಿತು ಅದುವೇ ಹದಿನಾಲ್ಕನೆ ದಿನ || ೯೬ ||

## ೧೨. ಸಚಿವರಿಗೆ ಭರತನ ಆಜ್ಞೆಯು

ಸಚಿವರು ಬಂದರು ಭರತನ ಹತ್ತಿರ
ಕೇಳಿದರವನಿಗೆ ರಾಜನು ಆಗಲು
ಪಟ್ಟವ ಏರುತ ರಾಜ್ಯವ ಆಳಲು
ಪೌರರು ಸಚಿವರು ಕಾದಿಹರೆಲ್ಲರು || ೯೭ ||

ಸಚಿವರೆ ಬಲ್ಲಿರಿ ವಂಶದ ಪದ್ಧತಿ
ಅಗ್ರಜ ಮಾತ್ರವೆ ಬಾಧ್ಯನು ರಾಜ್ಯಕೆ
ರಾಮನು ಒಬ್ಬನೆ ರಾಜ್ಯಕೆ ರಾಜನು
ಹೊರಡುವೆ ಈಗಲೆ ಕಾಡಿಗೆ ನಾನೂ || ೯೮ ||

ಸೈನ್ಯದ ಸಿದ್ಧತೆ ಆಗಲಿ ಕೂಡಲೆ
ಪೌರರು ಸಚಿವರು ಎಲ್ಲರೂ ಬರಲಿ
ರಾಮನ ತರುವೆನು ನಿಶ್ಚಿತ ತಿಳಿಯಿರಿ
ಕಾಡಿಗೆ ಹೋಗುವೆ ರಾಮನ ಬದಲು || ೯೯ ||

ಕಾಡಿನ ಹಾದಿಯ ಮಾಡಿರಿ ಸುಗಮವ
ನಾಳೆಯು ದಿನವೇ ಹೊರಡುವ ಎಲ್ಲರು
ಹೊರಟರು ಅಂತೆಯೆ ಮರುದಿನ ಎಲ್ಲರು
ಸಂಜೆಗೆ ಮುಟ್ಟುತ ಗಂಗೆಯ ದಡವನು || ೧೦೦ ||

## ೮೩. ಗುಹನ ಪ್ರತಿಕ್ರಿಯೆ

ಕೇಳುತ ಸುದ್ದಿಯ ಬಂದನು ಗುಹನು
ಆಪ್ತರು ಇಷ್ಟರು ಕುವರರ ಸಹಿತದಿ
ನೋಡುತ ಭರತನ ಸೈನ್ಯದ ಸಾಗರ
ತಿಳಿದನು ಮನದಲಿ ಬೇರೆಯೆ ಯೋಚನೆ || ೧೦೧ ||

ಭರತನು ಬಂದಿಹ ರಾಮನ ಕೊಲ್ಲಲು
ರಾಮನು ಮಾತ್ರವೆ ಒಡೆಯನು ಗೆಳೆಯನು
ನಿಲ್ಲಿರಿ ಎಲ್ಲರು ಗಂಗೆಯ ದಡದಲಿ
ನೌಕೆಗಳೆಲ್ಲವು ಸಿದ್ಧವು ಇರಲಿ || ೧೦೨ ||

ಭರತನ ಸೈನ್ಯವು ದಾಟಲು ಕೂಡದು
ಹೋಗುತ ನಾನೇ ತಿಳಿಯುವೆ ವಿಷಯವ
ಎನ್ನುತ ಬಂದನು ಭರತನ ಶಿಬಿರಕೆ
ಗುಹನನು ನೋಡುತ ಎಂದನು ಸುಮಂತ || ೧೦೩ ||

ಭರತನೆ ಆರ್ಯನೆ ಬರುತಿಹ ಗುಹನು
ಇರುವನು ನಿಜಕೂ ನಿಷಾದ ರಾಜನು
ಕಾಡಿನ ಸಂಗತಿ ಬಲ್ಲನು ಎಲ್ಲವ
ಗೊತ್ತಿದೆ ಆವನಿಗೆ ರಾಮನ ತಾಣವು ॥ ೧೦೪ ॥

ಭರತನ ಅಪ್ಪಣೆ ಹೋಯಿತು ಕೂಡಲೆ
ಕರೆಸಲು ಗುಹನನು ಶಿಬಿರದ ಒಳಗೆ
ಕೈಯನು ಜೋಡಿಸಿ ಬಂದನು ಗುಹವರ
ನಿಮ್ಮಯ ಭೃತ್ಯರು ಪಡೆಯಿರಿ ಸೇವೆಯ ॥ ೧೦೫ ॥

ಎಮ್ಮಯ ಫಲಗಳ ಜೇನನು ಹಾಲನು
ಹೊಂದುತ ಎಲ್ಲರು ಪಡೆಯಿರಿ ಸೇವೆಯು
ಕೇಳುತ ಭರತನು ಆದನು ತುಷ್ಟನು
ಸಂದಿತು ನಿನ್ನಯ ಸೇವೆಯು ಇಂದಿಗೆ ॥ ೧೦೬ ॥

ರಾಮನು ಇರುತಿಹ ತಾಣವು ಎಲ್ಲಿದೆ
ಹೋಗಲು ಹಾದಿಯು ಇರುವದು ಹೇಗೆ
ದಾರಿಯ ತೋರಿಸು ಅಲ್ಲಿಗೆ ಹೋಗಲು
ಉತ್ತರವಿತ್ತನು ಗುಹನೂ ಆಗಲೆ ॥ ೧೦೭ ॥

ಭರತನೆ ಶ್ರೇಷ್ಠನೆ ದಾರಿಯ ತೋರುವೆ
ಇರುವದು ಮನದಲಿ ಸಂಶಯ ನಿಜಕೂ
ರಾಮನ ಭೆಟ್ಟಿಗೆ ಸೈನ್ಯವು ಏಕೆ
ತಿಳಿದನು ಒಳಗಿನ ಅರ್ಥವ ಭರತನು ॥ ೧೦೮ ॥

ರಾಮನ ಗೆಳೆಯನೆ ತಿಳಿದಿರು ನಿಜಕೂ
ರಾಮನ ತಿಳಿದಿಹೆ ತಂದೆಯ ಸರಿಸಮ
ಹೋಗುತಲಿರುವೆನು ಪರಿವಾರ ಸಹಿತ
ಬೇಡುವೆ ಅಣ್ಣನ ಪಟ್ಟಕೆ ಕೊಡಲು ॥ ೧೦೯ ॥

ನಂಬೆಲೊ ಗುಹನೇ ಎನ್ನಯ ಮಾತನು
ಸಂಶಯ ಬೇಡಾ ಮನದಲಿ ಎಷ್ಟೂ
ಸಂತಸದಿಂದಲಿ ಅಂದನು ಗುಹವರ
ಧನ್ಯನು ಆರ್ಯನೆ ನಿಜಕೂ ನೀನು ॥ ೧೧೦ ॥

ಕಂಟಕರಹಿತವು ರಾಜ್ಯವು ಬಂದರು
ತಳ್ಳುವ ತ್ಯಾಗಿಯು ಆಗಿಹೆ ನೀನು
ರಾಮನ ತಮ್ಮನು ನಿಜಕೂ ಶ್ರೇಷ್ಠನು
ವಂದನೆ ನಿನಗೂ ನಿನ್ನಯ ವಂಶಕೆ ॥ ೧೧೧ ॥

ಅಂದಿನ ರಾತ್ರಿಯ ಕಳೆದರು ಅಲ್ಲಿಯೆ
ನಿಷಾದ ರಾಜನು ಹೇಳಿದ ಕತೆಯನು
ಲಕ್ಷ್ಮಣ ಕಾಯುತ ರಾತ್ರಿಯ ಕಳೆದುದ
ನಿದ್ರೆಯು ಇಲ್ಲದೆ ಎಚ್ಚರದಿಂದಲಿ ॥ ೧೧೨ ॥

ಕೇಳುತ ಎಲ್ಲವ ಮಿಡುಕಿದ ಭರತನು
ಹೇಳೆಲೊ ರಾಮನು ಮಾಡಿದುದೆಲ್ಲವ
ತಿಂದನು ಏನನು ಮಲಗಿದುದೆಲ್ಲಿ
ನಿಷಾದರಾಜನು ಅಂದನು ಈ ಪರಿ ॥ ೧೧೩ ॥

ಫಲಗಳ ಜೇನನು ಹಾಲನು ಕೊಟ್ಟನು
ಅಂದನು ರಾಮನು ತೃಪ್ತನು ಎಂದು
ಆದರೆ ಏನೂ ತಿನ್ನಲೆ ಇಲ್ಲಾ
ಅಂದನು ತಿನ್ನಲು ಕೂಡದು ಎಂದು || ೧೧೪ ||

ಕ್ಷತ್ರಿಯ ರಾಜನು ಇರುವದು ಕಾರಣ
ಕೊಡುವದು ಒಂದೇ ಕೆಲಸವು ತನಗೆ
ಬೇಡಲು ಎಂದೂ ಆಗದು ಎಂದನು
ಕುಡಿದನು ಕೇವಲ ಗಂಗಾ ಜಲವನು || ೧೧೫ ||

ಮೂವರು ಕುಡಿಯುತ ಗಂಗಾ ಜಲವನು
ಕಳೆದರು ಆ ದಿನ ದರ್ಭೆಯ ಲೊರಗುತ
ಲಕ್ಷ್ಮಣ ನಿಂತನು ಬಿಲ್ಲನು ಹಿಡಿಯುತ
ರಾತ್ರಿಯ ಕಳೆದನು ಕಾಯುತ ಅವರನು || ೧೧೬ ||

ಕೊಡಲೆ ಹೋದನು ಭರತನು ಗಿಡದಡಿ
ನೋಡಿದ ಸ್ಥಳವನು ರಾಮನು ಮಲಗಿದ
ಕಣ್ಣಿಗೆ ಕಾಣದು ಕಂಬನಿ ತುಂಬುತ
ನೆನಸುತ ಅಣ್ಣನ ಬಿಂಬವ ಹೃದಯದಿ || ೧೧೭ ||

**೧೩. ಭರದ್ವಾಜರ ಆಶ್ರಮದಲ್ಲಿ ಭರತನು**

ಮರುದಿನ ಎಲ್ಲರು ದಾಟುತ ಗಂಗೆಯ
ತಲುಪಿದರಾಶ್ರಮ ಭರದ್ವಾಜರಿಹ
ಭರತನು ವಸಿಷ್ಠ ಋತ್ವಿಜರೊಡನೆ
ಹೊರಟನು ಕಾಣಲು ತಾಪಸಿ ಋಷಿಯನು || ೧೧೮ ||

ಕಾಣುತ ವಸಿಷ್ಠ ಋಷಿಗಳನಾಗಲೆ
ಏಳುತ ಸ್ವಾಗತ ಕೋರಿದರವರಿಗೆ
ಕುಶಲದ ಪ್ರಶ್ನೆಯು ಆಯಿತು ಅವರಲಿ
ನಂತರ ಕೇಳಿದ ಭರದ್ವಾಜಮುನಿ ॥ ೧೧೯ ॥

ಬಂದುದು ಏಕಿದು ಸೈನ್ಯವು ಕುವರನೆ
ರಾಮನ ತೊಡೆಯಲು ಸಾಹಸವಿಹುದೇ
ಕಂಬನಿ ತುಂಬುತ ಭರತನು ಅಂದನು
ಅಂತಹ ಪಾಪಿಯು ಅಲ್ಲವು ನಾನು ॥ ೧೨೦ ॥

ತಾಯಿಯ ಮಾತಿಗೆ ಮಣಿಯುತ ತಂದೆಯು
ಅಟ್ಟಿದ ಅಡವಿಗೆ ರಾಮನ ಅವನು
ನಾನದು ಒಪ್ಪೆನು ಎಂದಿಗು ಮುನಿಯೇ
ಒಪ್ಪಿಸಿ ಅಣ್ಣನ ಕರೆಯಲು ಹೋಗುವೆ ॥ ೧೨೧ ॥

ಕೇಳುತ ನುಡಿಗಳ ಮುನಿಗಳು ಅಂದರು
ಯೋಗ್ಯವು ಕುವರನೆ ನಿನ್ನಯ ಮಾತಿದು
ವಂಶಕೆ ತಕ್ಕುದು ನಿನ್ನಯ ನಡತೆಯು
ಇಂದಿನ ದಿನವನು ಇಲ್ಲಿಯೆ ಕಳೆಯಿರಿ ॥ ೧೨೨ ॥

ನಾಳಿಗೆ ತಲುಪಿರಿ ಚಿತ್ರಕೂಟವನ
ಅಲ್ಲಿಯೆ ಇರುವರು ರಾಮನು ಸೀತೆಯು
ಅನುಜನು ಲಕ್ಷ್ಮಣ ತಾಪಸ ರೂಪದಿ
ಭರತನು ಕಳೆದನು ಆ ದಿನ ಅಲ್ಲಿಯೆ ॥ ೧೨೩ ॥

೧೪. ಚಿತ್ರಕೂಟದಲ್ಲಿ

ಮರುದಿನ ಪಡೆಯುತ ಅಪ್ಪಣೆ ಋಷಿಗಳ
ಹೊರಟರು ಎಲ್ಲರು ಚಿತ್ರಕೂಟದೆಡೆ
ಇದ್ದಿತು ಅದುವೇ ಸುಂದರ ವನವು
ಇಲ್ಲಿಗೆ ದೂರವು ಎರಡು ಯೋಜನವು ॥ ೧೨೪ ॥

ತಲುಪಿದರೆಲ್ಲರು ಚಿತ್ರಕೂಟವನ
ಇದ್ದಿತು ಅಲ್ಲಿಯೆ ಮಂದಾಕಿನಿ ನದಿ
ಗಿಡಬಳ್ಳಿಗಳಲಿ ಅರಳಿದ ಹೂಗಳು
ದುಂಬಿಯು ಚುಂಬನ ಪಡೆಯುತಲಿದ್ದವು ॥ ೧೨೫ ॥

ಸುಂದರ ಸೊಬಗಿನ ಗಿಡಗಳು ಎಲ್ಲೆಡೆ
ನೀರಿನ ಝರಿಗಳು ಹರಿಯುತ ಸುತ್ತಲು
ಆಡುವ ಓಡುವ ವನಚರ ಎಲ್ಲವು
ಬೀರುತಲಿದ್ದವು ಸಂತಸ ಮನದಲಿ ॥ ೧೨೬ ॥

ಭರತನ ಸೈನ್ಯದ ಆರ್ಭಟ ಕೇಳುತ
ಚದರುತಲಿದ್ದವು ವನಚರವೆಲ್ಲವು
ಏರಿತು ಧೂಳವು ಗಗನದ ತುಂಬಾ
ಸಪ್ಪಳ ಕೇಳಿತು ಬಹುದೂರದಿಂದ ॥ ೧೨೭ ॥

೧೫. ಲಕ್ಷ್ಮಣನ ಪ್ರತಿಕ್ರಿಯೆ

ನೋಡುತ ಎಲ್ಲವ ರಾಮನು ಅಂದನು
ಲಕ್ಷ್ಮಣ ಏನಿದು ಸಪ್ಪಳವೆಲ್ಲವು
ಏರುತ ಮರವನು ಮುಟ್ಟದ ತುದಿಯನು
ಬರುತಿಹ ಸೈನ್ಯವ ಕಂಡನು ಅವನು ॥ ೧೨೮ ॥

ಕೂಗಿದ ಅಣ್ಣನೆ ಸೈನ್ಯವು ಬರುತಿದೆ
ಅತ್ತಿಗೆ ಕೂಡಲೆ ಒಲೆಯನು ಆರಿಸು
ಹೋಗುತ ಒಳಗಡೆ ಬಿಲ್ಲನು ಕೊಡು ನೀ
ಅಣ್ಣನೆ ಸಿದ್ಧರು ಆಗಿರಿ ನೀವೂ || ೧೨೯ ||

ರಾಮನು ಅಂದನು ಸೈನ್ಯವು ಯಾರದು
ಲಕ್ಷ್ಮಣ ನೋಡುತ ಅಂದನು ಸಿಟ್ಟಲಿ
ಕಾಣುವದಿಲ್ಲಿಗೆ ಎಮ್ಮಯ ಧ್ವಜವು
ಭರತನು ಬರುತಿಹ ಎಮ್ಮನು ಕೊಲ್ಲಲು || ೧೩೦ ||

ಅಲ್ಲದೆ ಸೈನ್ಯವ ತಂದಿಹನಿಲ್ಲಿಗೆ
ರಾಜ್ಯವ ಕಸಿಯುತ ಪಟ್ಟವನೇರಿ
ಬರುತಿಹ ಭರತನು ಕೊಲ್ಲಲು ಎಮ್ಮನು
ಆಗಲಿ ನೋಡಲಿ ಎನ್ನಯ ಬಲವನು || ೧೩೧ ||

ಕೊಲ್ಲುವೆ ಭರತನ ಇಲ್ಲಿಯೆ ನಾನು
ನಂತರ ಕೊಲ್ಲುವೆ ಕೈಕೆಯಿ ರಕ್ಕಸಿ
ತರಿಯುವೆ ಕೈಕೆಯಿ ಬಂಧುಗಳೆಲ್ಲರ
ಕೊಡುವೆನು ಬಾಣಕೆ ನೆತ್ತರದೂಟವ || ೧೩೨ ||

ಕೋಪದಿ ಉರಿಯುವ ಲಕ್ಷ್ಮಣಗಂದನು
ಅನುಜನೆ ಶಾಂತನು ಆಗುತ ಚಿಂತಿಸು
ರಾಜ್ಯವು ಎನಗದು ಎಂದಿಗು ಬೇಡಾ
ಆಳುವದಾದರು ನಿಮಗದು ಮಾತ್ರವೆ || ೧೩೩ ||

ಭರತನು ಇರುವನು ಧಾರ್ಮಿಕ ವಿವೇಕಿ
ಬೇಡದ ನಿಜಕೂ ರಾಜ್ಯವು ಇದ್ದೂ
ಭರತನು ಬಂದರೆ ಕೊಲ್ಲಲೆ ಅವನನು ?
ತಿಳಿದಿರು ನಿಜವಿದು ಬಿಲ್ಲಿನ ಆಣೆಯು || ೧೩೪ ||

ತಮ್ಮನ ಕೊಲ್ಲುತ ಪಟ್ಟವ ಏರಲಿ
ಗೆಲ್ಲಲು ಬಲ್ಲೆನು ಪೃಥ್ವಿಯನೆಲ್ಲವ
ಧರ್ಮವ ಬಿಡುತಲಿ ನಡೆಯೆನು ಎಂದೂ
ತಿಳಿದಿರು ಹೊರಟಿಹೆ ವಚನವ ಪೂರ್ತಿಗೆ || ೧೩೫ ||

ಭರತನು ಕೇಳುತ ಎಮ್ಮಯ ಸಂಗತಿ
ಸ್ನೇಹವು ಉಕ್ಕುತ ಬರುತಿಹ ನಿಶ್ಚಿತ
ರಾಜ್ಯದ ಕಾಮನೆ ಇಲ್ಲವು ಅವನಿಗೆ
ಬರುತಿಹ ಇಲ್ಲಿಗೆ ರಾಜ್ಯವ ನೀಡಲು || ೧೩೬ ||

ತಿಳಿಸುವೆ ಅವನಿಗೆ ನಿನಗೇ ಕೊಡಲು
ನಿಶ್ಚಿತ ನಿನಗೇ ಪಟ್ಟವ ಕಟ್ಟುವ
ಕೇಳುತ ಲಕ್ಷ್ಮಣ ನಾಚಿದ ಮನದಲಿ
ಅಣ್ಣನೆ ತಂದೆಯೆ ಬರುತಿರಬಹುದೇ || ೧೩೭ ||

ರಾಮನು ಅಂದನು ಅದುವೂ ಸರಿಯೇ
ತಂದೆಯು ಚಿಂತಿಸಿ ಕರೆಯಲು ಬಂದಿಹ
ಕಾಣುತಲಿರುವದು ಪಟ್ಟದ ಆನೆಯು
ಅಲ್ಲದೆ ಕುದುರೆಯು ಧ್ವಜ ಹೊತ್ತುಕೊಂಡು || ೧೩೮ ||

ಆದರೆ ಏನಿದು ಅಚ್ಚರಿಯಲ್ಲವೆ
ರಾಜನ ಬಿಳಿಕೊಡೆ ಕಾಣದು ಎಲ್ಲಿಯು
ಲಕ್ಷ್ಮಣ ಕಳವಳ ಹೆಚ್ಚಿದೆ ಮನದಲಿ
ಕೇಳುವೆ ಸುದ್ದಿಯ ಎಂತದೊ ಏನೋ || ೧೩೯ ||

೧೬. ಭರತನ ಆಗಮನ

ಭರತನು ನಿಲ್ಲಿಸಿ ಸೈನ್ಯವ ದೂರದಿ
ರಥವನು ತೊರೆಯುತ ನಡೆಯುತ ಹೊರಟನು
ಹೊಗೆಯನು ದಿಟ್ಟಿಸಿ ತಿಳಿದನು ಆಶ್ರಮ
ಅದುವೇ ರಾಮನು ಇರುತಿಹ ತಾಣವು || ೧೪೦ ||

ಹೇಳಿದ ವಸಿಷ್ಠ ಮುನಿವರ ಗುರುವಿಗೆ
ಕರೆಯಲು ಅಲ್ಲಿಗೆ ತಾಯಿಯರೆಲ್ಲರ
ಹೊರಟನು ಭರತನು ಮುಂದೆಯೆ ಮೊದಲಿಗೆ
ಇದ್ದನು ಸುಮಂತ ಶತೃಘ್ನ ಸಹಿತ || ೧೪೧ ||

ದೂರದಿ ಕಂಡನು ಆಶ್ರಮವೊಂದನು
ಅಲ್ಲಿಯೆ ಕಟ್ಟೆಯ ಮೇಲೆಯೆ ಇದ್ದಿತು
ಚಿಗರಿಯ ಚರ್ಮವು ಮೇಲೆಯೆ ರಾಮನು
ನಾರನು ಉಟ್ಟಿಹ ಜಡೆಯನು ಕಟ್ಟಿಹ || ೧೪೨ ||

ಬದಿಯಲಿ ಇದ್ದವು ಬಿಲ್ಲುಬಾಣಗಳು
ಹತ್ತಿರ ನಿಂತಿಹ ಜಾನಕಿ ಕೂಡಾ
ಲಕ್ಷ್ಮಣ ಇದ್ದನು ಬಿಲ್ಲನು ಹಿಡಿದಿಹ
ಓಡಿದ ಭರತನು ಅಣ್ಣಾ ! ಎನ್ನುತ || ೧೪೩ ||

ತಡೆಯದೆ ದುಃಖವ ಬಿದ್ದನು ಮಧ್ಯದಿ
ರಾಮನು ಬರುತಲೆ ಎತ್ತಿದ ಅವನನು
ಎದೆಯೊಳು ಒತ್ತಿದ ಭರತನ ತಲೆಯನು
ಮಾತನು ಆಡನು ಕಂಬನಿ ಉದುರಿತು. ॥ ೧೪೪ ॥

ರಾಮನು ಲಕ್ಷ್ಮಣ ಶತ್ರುಘ್ನ ಭರತ
ಕೂಡಿದರೆಲ್ಲರು ಕಂಬನಿ ತುಂಬುತ
ಸುಮಂತ ಗುಹರೂ ಬೆರೆತರು ಆಗಲೆ
ನಾಲಿಗೆ ಚಲಿಸದೆ ವೇದನೆ ಹೆಚ್ಚಿತು ॥ ೧೪೫ ॥

ದುಃಖದ ವೇಗವು ಇಳಿಯಲು ರಾಮನು
ಅಂದನು ಭರತಗೆ ಅಪ್ಪುಗೆ ಬಿಡದಲೆ
ಏನಿದು ಭರತನೆ ತಂದೆಯು ಕ್ಷೇಮವೆ
ರಾಜ್ಯದ ಆಳಿಕೆ ಸಾಗಿದೆ ಸರಿಯೇ ॥ ೧೪೬ ॥

ಮಾತೆಯರೆಲ್ಲರು ಇರುವರೆ ಕ್ಷೇಮದಿ
ಅಲ್ಲದೆ ಜನರಲಿ ಸಂತಸವಿದೆಯೋ
ಕೇಳುತ ರಾಮನ ಮಾತನು ಭರತನು
ಅಳುತಲಿ ಅಂದನು ತಂದೆಯು ಹೋದನು ॥ ೧೪೭ ॥

ತೀರಿದ ತಂದೆಯು ಬಹುವದರೊಳಗೇ
ಕೇಳಲೆ ಇಲ್ಲವು ಮಾತನು ಒಂದೂ
ಸೇರಿದ ಸಗ್ಗವ ಸಂಕಟಪಡುತಲಿ
ನಿನ್ನನೆ ಚಿಂತಿಸಿ ನಿನ್ನನೆ ನೆನಸುತ ॥ ೧೪೮ ॥

ಬಿಟ್ಟನು ದೇಹವ ಮೆಚ್ಚಿನ ತಂದೆಯು
ನೀನೇ ಯೋಗ್ಯನು ತರ್ಪಣವೀಯಲು
ಕೇಳುತ ತಂದೆಯ ಮರಣದ ಸುದ್ದಿಯ
ಕುಸಿದನು ಅಲ್ಲಿಯೆ ದುಃಖದ ಭಾರದಿ || ೧೪೯ ||

ದುಃಖಿಸಿ ಎಲ್ಲರು ನಡೆದರು ನದಿಗೆ
ಕೊಟ್ಟರು ನಾಲ್ವರು ತರ್ಪಣ ಅಲ್ಲಿಯೆ
ಬರುತಲಿ ಮೇಲಕೆ ಪಿಂಡವ ಕೊಡುತಲಿ
ನಿಂತಿಹ ಸಮಯದಿ ಬಂದರು ಪೌರರು || ೧೫೦ ||

ರಾಮನ ಕಾಣುತ ಎರಗುತ ಭೂಮಿಗೆ
ಉಕ್ಕಿದ ದುಃಖವ ತಡೆಯುತ ಎಲ್ಲರು
ಕಂಡರು ರಾಮನ ಲಕ್ಷ್ಮಣ ಸೀತೆಯ
ನಾರಿನ ಮಡಿಯಲಿ ನೆಲದಲಿ ಕುಳಿತಿಹ || ೧೫೧ ||

ಆಗಲೆ ಬಂದರು ವಸಿಷ್ಠ ಋಷಿಗಳು
ದಶರಥರಾಣಿಯರೆಲ್ಲರ ಸಂಗಡ
ರಾಮನು ಏಳುತ ಪಾದವ ಮುಟ್ಟಿದ
ಅಂತೆಯೆ ಸೀತೆಯು ಲಕ್ಷ್ಮಣ ಕೂಡಾ || ೧೫೨ ||

ಏನಿದು ಸೀತೆಯೆ ಜನಕನ ಕುವರಿಯೆ
ದಶರಥಸೊಸೆಯೇ ರಾಮನ ಪತ್ನಿಯೆ
ಇದ್ದರು ಎಲ್ಲವು ಕಾಡಿನ ಅಬಲೆಯು
ದೈವದ ಶಕ್ತಿಯು ನಿಜಕೂ ಘೋರವು || ೧೫೩ ||

ನಂತರ ರಾಘವ ವಸಿಷ್ಠ ಮುನಿಗಳ
ಪಾದವ ಮುಟ್ಟುತ ಕುಳಿತನು ಹತ್ತಿರ
ಅಲ್ಲಿಯೆ ಕುಳಿತನು ಭರತನು ಕೂಡಾ
ರಾಮನು ಅಂದನು ಭರತನಿಗಾಗಲೆ || ೧೫೪ ||

## ೧೭. ರಾಮ–ಭರತರ ಸಂವಾದ

ಭರತನೆ ಏಕಿದು ನಾರನು ಉಟ್ಟಿಹೆ
ಅಲ್ಲದೆ ಚರ್ಮವ ಹೊದೆದಿಹೆ ನೀನೂ
ಜಟವನು ಧರಿಸುತ ಬಂದುದು ಏಕದು
ಭರತನು ಅಂದನು ಕೈಗಳ ಜೋಡಿಸಿ || ೧೫೫ ||

ತಂದೆಯು ಹೋದನು ಆಗಲಿಕೆ ತಡೆಯದೆ
ಅಟ್ಟಿದ ನಿನ್ನನು ಪತ್ನಿಯ ಮಾತಿಗೆ
ರಾಜ್ಯದ ಆಶೆಯು ಎನಿತೂ ಇಲ್ಲವು
ನೀನೇ ಬಾಧ್ಯನು ರಾಜ್ಯಕೆ ಎಂದಿಗು || ೧೫೬ ||

ಕರೆಯಲು ಬಂದಿಹೆ ನಿನ್ನನು ರಾಜ್ಯಕೆ
ಗುರುಗಳು ಋಷಿಗಳು ದ್ವಿಜರೂ ಎಲ್ಲರು
ಅಲ್ಲದೆ ಪೌರರು ಮಾತೆಯರೆಲ್ಲರು
ಸೈನಿಕ ಸೇವಕ ದೂತರು ಕೂಡಾ || ೧೫೭ ||

ಇಚ್ಛಿಪರೆಲ್ಲರು ನಿನ್ನಯ ಬರವನು
ಎನ್ನುತ ಹಿಡಿದನು ಅಣ್ಣನ ಪಾದವ
ಎನ್ನಯ ಜನನಿಯ ಕುಟಿಲತೆ ಕಾರಣ
ಹೋಯಿತು ನಿನ್ನಯ ರಾಜ್ಯದ ಭೋಗವು || ೧೫೮ ||

ರಾಮನು ಅಂದನು ಭರತನೆ ಸದ್ಗುಣಿ
ಧರ್ಮವ ತಿಳಿದೂ ತಪ್ಪುವೆ ಏಕದು
ತಂದೆಗೆ ಮಕ್ಕಳು ಅಧೀನ ಎಲ್ಲರು
ಇಚ್ಛೆಗೆ ಅನುಗುಣ ಹೇಳಲು ಶಕ್ತರು ॥ ೧೫೯ ॥

ತಾಯಿಯ ಹಳಿಯುವ ತಪ್ಪನು ಬಿಡು ನೀ
ತಂದೆಯ ವಚನದ ಪಾಲನೆ ನನ್ನದು
ಕಾಡಿಗೆ ಪೋಪುದೆ ಯುಕ್ತವು ಎನಗೆ
ರಾಜ್ಯದ ಆಳಿಕೆ ಯುಕ್ತವು ನಿನಗೆ ॥ ೧೬೦ ॥

ತಂದೆಯು ಕೊಟ್ಟಿಹ ಭಾಗವ ಮಾಡುತ
ರಾಜ್ಯದ ಭೋಗವು ನಿನ್ನಯ ಪಾಲಿಗೆ
ಕಾಡಿನ ಯೋಗವು ಎನ್ನಯ ಪಾಲಿಗೆ
ಅದುವೇ ಹಿತವದು ನಿಶ್ಚಿತ ತಿಳಿದಿಹೆ ॥ ೧೬೧ ॥

ಪಾಲನೆ ಮಾಡುವೆ ವಚನವ ಪೂರ್ತಿ
ಮನದಲಿ ದುಃಖವು ಎನಿತೂ ಇಲ್ಲವು
ಆಗಲಿ ಅಂದನು ಭರತನು ಮುಂದೆಯೆ
ತಾಯಿಯ ಒಪ್ಪಿಗೆ ಇದ್ದುದರಿಂದಲೇ ॥ ೧೬೨ ॥

ಹೇಳುವೆ ನಾನೂ ಕೇಳೆಲೊ ಅಣ್ಣನೆ
ತಾಯಿಯು ಕೊಟ್ಟಳು ರಾಜ್ಯವ ಎನಗೆ
ಆದರೆ ಕೊಡುವೆನು ಅದನೇ ನಿನಗೆ
ಎನಗೇ ಬಂದುದ ಕೊಡಲಿಕೆ ಶಕ್ತನು ॥ ೧೬೩ ॥

ಪಡೆಯುತ ರಾಜ್ಯವ ಪಟ್ಟವ ಏರುತ
ಸಂತಸಪಡಿಸುತ ರಾಜ್ಯದ ಜನತೆಯ
ಈಗಲೆ ಹೊರಡುತ ಕರುಣೆಯ ತೋರಿಸು
ಅಂದನು ರಾಮನು ಭರತಗೆ ಮೆಲ್ಲಗೆ || ೧೬೪ ||

ಭರತನೆ ತಿಳಿ ನೀ ದೈವದ ಶಕ್ತಿಗೆ
ಇರುವೆವು ಎಲ್ಲರು ಸೂತ್ರದ ಗೊಂಬೆಯು
ಕರ್ಮಕೆ ಹೊಂದುತ ಆಟವ ಆಡುತ
ಹೋಗುವೆವೆಲ್ಲರು ಜಗದಲಿ ನಾವು || ೧೬೫ ||

ಚಿಂತೆಯು ಬೇಡಾ ಪಾಲಿಗೆ ಬಂದುದ
ಉಣ್ಣಲು ಎಲ್ಲರು ಬಲ್ಲರು ಅಲ್ಲವೆ
ಭರತನು ಅಂದನು ಅಣ್ಣನೆ ಕೇಳು
ತಂದೆಯು ಪೂಜ್ಯನು ಇದ್ದುದು ನಿಜವೇ || ೧೬೬ ||

ಆದರೆ ಪತ್ನಿಯ ಮೋಹಕೆ ಬೀಳುತ
ಮಾಡಿದ ನಿಶ್ಚಿತ ಧರ್ಮದ ಚ್ಯುತಿಯನು
ತಿಳಿದೂ ತಿಳಿದೂ ಒಪ್ಪೆನು ಎಂದೂ
ಇಂತಹ ಹೇಯದ ಕೃತ್ಯವ ಒಪ್ಪೆನು || ೧೬೭ ||

ಧರ್ಮದ ಬಾಹಿರ ಅರ್ಥಶೂನ್ಯವಿಹ
ಕೃತಿಯಿದು ಧಾರ್ಮಿಕ ಕಾರ್ಯವು ಅಹುದೇ
ತಂದೆಯ ತಪ್ಪನು ಎಣಿಸೆನು ಎಂದೂ
ಆದರು ತಪ್ಪನು ತಿದ್ದಲು ಬೇಡವೆ || ೧೬೮ ||

ತಪ್ಪನು ತಿದ್ದಲು ಸಮರ್ಥ ಇರುವನು
ನೀನೇ ಒಬ್ಬನು ತಿಳಿದಿರು ಇದನೂ
ರಾಜ್ಯದ ಜನತೆಯು ಶುಭವನು ಚಿಂತಿಸಿ
ರಾಜ್ಯವ ಹೊಂದುತ ಪಟ್ಟವನೇರು || ೧೬೯ ||

ಅಲ್ಲದೆ ಧರ್ಮವು ಯಾವುದು ಮುಖ್ಯವು
ಕ್ಷತ್ರಿಯ ರಾಜಗೆ ಕ್ಷಾತ್ರವೆ ಧರ್ಮವು
ದುಷ್ಟರ ಶಿಕ್ಷಿಸಿ ಶಿಷ್ಟರ ರಕ್ಷಿಸಿ
ರಾಜ್ಯದ ಪಾಲನೆ ಮಾಡಲು ಧರ್ಮವು || ೧೭೦ ||

ಕರ್ಮದ ಫಲವನು ಚಿಂತಿಸ ಹೋದರೆ
ರಾಜ್ಯದ ಫಲವದು ಬರುವದು ಬೇಗನೆ
ಅಲ್ಲದೆ ಅದುವೇ ಕಣ್ಣಿಗೆ ನಿಚ್ಚಳ
ತಪಸಿನ ರೀತಿಯು ಕ್ಷಾತ್ರಕೆ ಸಲ್ಲದು || ೧೭೧ ||

ಅಲ್ಲದೆ ಫಲವಧು ಕಣ್ಣಿಗೆ ಕಾಣಧು
ಕಂಡುದ ಬಿಡುತಲಿ ಕಾಣದು ಬಯಸಲು
ಯುಕ್ತಿಯು ಅಲ್ಲವು ಯುಕ್ತವು ಅಲ್ಲವು
ಬಂದಿಹರಿಲ್ಲಿಯೆ ಎಲ್ಲರು ಗುರುಗಳು || ೧೭೨ ||

ಆಗಲಿ ಪಟ್ಟದ ಸಂಭ್ರಮವಿಲ್ಲಿಯೆ
ಅಪವಾದವೆನಗೆ ತಾಯಿಗೆ ಬಂದಿದೆ
ಬಂದರೆ ಊರಿಗೆ ಪೋಪುದು ಎಲ್ಲವು
ಇಲ್ಲದೆ ಹೋದರೆ ಬರುವೆನು ಕಾಡಿಗೆ || ೧೭೩ ||

ಭರತನೆ ತುಷ್ಟನು ನಿನ್ನಯ ಮಾತಿಗೆ
ಆದರೆ ತಿಳಿದಿರು ಧರ್ಮದ ಸೂಕ್ಷ್ಮವ
ತಂದೆಯು ಕೊಟ್ಟಿಹ ವರಗಳ ತಾಯಿಗೆ
ವಚನದ ಪೂರ್ತಿಯು ಕರ್ತವ್ಯವೆನಗೆ || ೧೭೪ ||

ಮಾಡುವೆ ನಿಶ್ಚಿತ ವಚನವ ಪೂರ್ತಿಯ
ಅಪ್ಪಣೆ ಆಗಿದೆ ರಾಜ್ಯವ ಆಳಲು
ಆಳುತ ರಾಜ್ಯವ ಮಾತನು ನಡೆಸು
ತಂದೆಗೆ ತಕ್ಕಸುಪುತ್ರನು ಆಗುತ || ೧೭೫ ||

ಹಿಂದಕೆ ಗಯೆಯೊಳು ಗಯರಾಜನಿದ್ದ
ಮಾಡಿದ ಯಾಗವ ಗಯಾ ಕ್ಷೇತ್ರದಲಿ
ಹೇಳಿದ ಆಗಲೆ ನೀತಿಯ ಮಾತನು
'ಪುತ್' ನರಕದಿಂದ ಉಳಿಸುವ ಕುವರನ || ೧೭೬ ||

ಕರೆಯುವರೆಲ್ಲರು ಪುತ್ರನು ಎಂದು
ಅಂತೆಯೆ ನೀನೂ ಪುತ್ರನು ಆಗು
ತಂದೆಯ ವಚನವ ಪಾಲಿಸಲೆಂದೇ
ಪಟ್ಟವ ಏರುತ ರಾಜ್ಯವ ಆಳು || ೧೭೭ ||

ಹೊರಡೆಲೊ ಈಗಲೆ ರಾಜ್ಯಕೆ ನೀನು
ಹೊರಡುವೆ ನಾನೂ ದಂಡಕವನಕೆ
ರಾಜ್ಯವ ಆಳುತ ಜನರನು ಪ್ರೀತಿಸು
ಕಾಡಿಗೆ ಹೋಗುವೆ ಚಿಂತಿಸಬೇಡಾ || ೧೭೮ ||

೧೮. ಜಾಬಾಲಿ ಮುನಿಯ ನಾಸ್ತಿಕವಾದ

ಕೇಳುತ ಎಲ್ಲವ ಜಾಬಾಲಿ ಮುನಿಯು
ಅಂದನು ಹೀಗೆಯೆ ನಾಸ್ತಿಕ ವಾದವ
ಏನಿದು ರಾಮನೆ ಏನಿದು ಚಿಂತನೆ
ಯಾರಿಗೆ ಯಾರೂ ಸಂಬಂಧವಿಲ್ಲ || ೧೭೯ ||

ತಾಯಿಯು ತಂದೆಯು ಎನ್ನುವದೆಲ್ಲವು
ಇರುವದು ಮನಸಿನ ಜಾಡ್ಯವು ಕಿಲುಬು
ಇವರುಗಳೆಲ್ಲರು ಇರುತಿಹ ತಾಣವು
ಜೀವದ ಯಾತ್ರೆಯ ದಾರಿಯ ಮಧ್ಯದಿ || ೧೮೦ ||

ನಿಜಕೂ ನೋಡಲು ತಂದೆಗು ನಿನಗೂ
ಇರುವದು ಏನದು ಸಂಬಂಧ ತಿಳಿಸು
ಮನುಜನ ಹುಟ್ಟಿಗೆ ಕಾರಣ ಬೀಜವು
ಶುಕ್ಲ ಶೋಣಿತದಿ ಹುಟ್ಟುವದೆಲ್ಲವು || ೧೮೧ ||

ದಶರಥ ಹೊಂದಿದ ಪಂಚಭೂತಗಳ
ಇಂತಹ ಲಯವೋ ನಿತ್ಯವು ಮನುಜಗೆ
ಸುಮ್ಮನೆ ತಿಳಿಯುತ ಸಂಬಂಧವೆಂದು
ಧರ್ಮದ ಹೆಸರಲಿ ಕಷ್ಟವು ಬೇಡಾ || ೧೮೨ ||

ಇಂತಹ ಜನರೋ ಸಾಯುವವರೆಗೂ
ಕಷ್ಟವ ಪಡುತಲಿ ಸಾವನು ಪಡೆವರು
ಶ್ರಾದ್ಧದ ಕಾರಣ ಪಿಂಡವ ಕೊಡುವರು
ಅನ್ನವ ಹಾಳೂ ಮಾಡುವರೆಲ್ಲರು || ೧೮೩ ||

ಸತ್ತವ ಬರುತಲಿ ಉಣ್ಣುವನೇ ಅವ
ಇಲ್ಲಿಯೆ ಒಬ್ಬನು ಉಂಡರೆ ಅದುವೇ
ಕೊಡುವದು ತೃಪ್ತಿಯ ಮೃತನಿಗೆ ಸಾಧ್ಯವೆ
ಸುಳ್ಳಿನ ಕಂತೆಯ ನಂಬುತ ಮಿಡುಕುವೆ || ೧೮೪ ||

ಇಲ್ಲಿಯೆ ಉಂಡರೆ ಪರಊರ ಮಗನ
ಹೊಟ್ಟೆಯು ತುಂಬಲು ಸಾಧ್ಯವೆ ಹೇಳೆಲೊ
ಪರಲೋಕವೆಂದು ಧರ್ಮವು ಎನ್ನುತ
ಅನ್ನುವದೆಲ್ಲವು ಸುಳ್ಳಿನ ಕಂತೆಯು || ೧೮೫ ||

ಮೇಧಾವಿಯಿದ್ದೂ ನಂಬುವಿ ಏಕಿದು
ಪ್ರತ್ಯಕ್ಷಕಾಣುವ ಸಂಗತಿ ಮಾತ್ರವೆ
ನಂಬಲು ಸಾಧ್ಯವು ಅದುವೇ ಪ್ರಮಾಣ
ಇದುವೇ ಇರುವದು ಎಲ್ಲರ ಚಿಂತನ || ೧೮೬ ||

ತೊರೆಯುತ ರಾಜ್ಯವ ಭೋಗವ ಎಲ್ಲಾ
ಕಾಡಿಗೆ ಹೋಗುವ ಹುಚ್ಚಿದು ಎಲ್ಲಾ
ಭರತನ ಮಾತನು ನಡೆಸುತ ಈಗಲೆ
ನಗರಕೆ ಹೋಗುತ ಪಟ್ಟವ ಏರೆಲೊ || ೧೮೭ ||

### ೨೯. ರಾಮನ ಉತ್ತರ

ಕೇಳುತ ಎಲ್ಲವ ಅಂದನು ರಾಮನು
ಮುನಿಗಳೆ ನಿಮ್ಮಯ ಮಾತನು ಒಪ್ಪೆನು
ನಾಸ್ತಿಕವಾದವ ಹೇಳುತಲಿರುವಿರಿ
ಕ್ಷುದ್ರದ ಮಾರ್ಗವ ತೋರುತಲಿರುವಿರಿ || ೧೮೮ ||

ಸ್ವೇಚ್ಛಾಚಾರದ ರೀತಿಯ ಹೇಳುತ
ನಿತ್ಯದ ಸತ್ಯವ ತಿಳಿಯರೆ ನೀವೂ
ರಾಜನ ನಡತೆಯೆ ಜನತೆಗೆ ಕನ್ನಡಿ
ಸತ್ಯವೆ ನಿತ್ಯವು ಈಶ್ವರ ಕೂಡಾ || ೧೮೯ ||

ಸತ್ಯದಿ ಲಕ್ಷ್ಮಿಯು ಸತ್ಯದಿ ಧರ್ಮವು
ಸತ್ಯಕೆ ಹೆಚ್ಚಿಗೆ ಯಾವುದು ಇಲ್ಲವು
ದಾನ ಯಜ್ಞ ತಪ ಹೇಳುವ ವೇದಕೆ
ಸತ್ಯವೆ ಮೂಲವು ಅಲ್ಲವೆ ಮುನಿಗಳೆ || ೧೯೦ ||

ತಂದೆಯ ವಚನದ ಪೂರ್ತಿಗೆ ಸಿದ್ಧನು
ನಾಸ್ತಿಕ ಮುನಿಯೇ ವಿಕಟದ ಬುದ್ಧಿಯು
ನಿಮ್ಮದು ಆಗಿದೆ ಸಂಶಯವಿಲ್ಲವು
ಗೌರವ ಪಡೆಯಲು ಯೋಗ್ಯವು ಅಲ್ಲವು || ೧೯೧ ||

ಜಾಬಾಲಿ ಮುನಿಯು ಅಂದನು ಆಗಲೆ
ಸಂತಸವಾಗಿದೆ ನಿನ್ನಯ ನುಡಿಯಿಂ
ತಿಳಿಯಲು ನಿನ್ನಯ ಇಂಗಿತವೆಲ್ಲವ
ಇಟ್ಟೆನು ನಾಸ್ತಿಕವಾದವ ಮುಂದೆಯೆ || ೧೯೨ ||

ನಿಜಕೂ ನಾಸ್ತಿಕನಲ್ಲವೊ ನಾನೂ
ವಸಿಷ್ಠ ಋಷಿಗಳು ಅಂದರು ಅಂತೆಯೆ
ಜಾಬಾಲಿ ಮುನಿಯು ನಾಸ್ತಿಕನಲ್ಲಾ
ತಿಳಿದಿಹ ಸೃಷ್ಟಿಯ ಜನನವ ಮರಣವ || ೧೯೩ ||

### ೩೦. ವಸಿಷ್ಠರು ಸೃಷ್ಟಿಯ ಜನನದ ಬಗ್ಗೆ ಹೇಳುವರು

ಕೇಳೆಲೊ ರಾಮನೆ ಸೃಷ್ಟಿಯ ಜನನವ
ಇದ್ದಿತು ಮೊದಲಿಗೆ ನೀರೇ ಎಲ್ಲೆಡೆ
ಪೃಥ್ವಿಯು ಹುಟ್ಟಿತು ಉದಕದಿಂದಲೇ
ಅಲ್ಲಿಯೆ ಹುಟ್ಟಲು ದೇವರು ಎಲ್ಲರು || ೧೯೪ ||

### ೩೧. ಇಕ್ಷ್ವಾಕು ವಂಶವಿವರಣೆ

ಬ್ರಹ್ಮನು ಹುಟ್ಟಿದ ಆಕಾಶದಿಂದ
ಅನಾದಿ ಅವಿನಾಶಿ ಪರಿಣಾಮ ಪುರುಷ
ಆತನ ಮಕ್ಕಳ ಸೃಷ್ಟಿಯು ಪ್ರಪಂಚ
ಬ್ರಹ್ಮನ ಮಗನೇ ಮರೀಚಿ ಮುನಿವರ || ೧೯೫ ||

ಮರೀಚಿ ಮಗನೇ ಕಶ್ಯಪ ಅವನಿಗೆ
ವಿವಸ್ವಂತ ಮಗ ಅವನಿಗೆ ಮನು ಮಗ
ಮನುವಿಗೆ ಇಕ್ಷ್ವಾಕು ಅವನಿಗೆ ಕುಕ್ಷಿಯು
ನಂತರ ವಿಕುಕ್ಷಿ ಬಾಣ ಅನರಣ್ಯ || ೧೯೬ ||

ಪೃಥುವೂ ತ್ರಿಶಂಕು ದುಂಧುಮಾರನು
ಯುವನಾಶ್ವ ಮಾಂಧಾತ ಸುಸಂಧಿಯೂ
ಧ್ರುವಸಂಧಿ ಭರತ ಅಸಿತಸಗರನೂ
ಅಸಮಂಜ ಅಂಶುಮಂತ ದಿಲೀಪನು || ೧೯೭ ||

ಭಗೀರಥ ಕಾಕುತ್ಸ್ಥ ರಘು ಪ್ರವೃದ್ಧ
ಶಂಖಣ ಸುದರ್ಶನ ಅಗ್ನಿವರ್ಣನು
ಶೀಘ್ರನ ಮರುವು ಪ್ರಶುಶ್ರುಕನಿಗೆ
ಅಂಬರೀಷ ನಹುಷ ನಾಭಾಗ ಅಜ || ೧೯೮ ||

ಅಜಸುತ ದಶರಥ ನಿನ್ನಯ ತಂದೆಯು
ಇರುವರು ಎಲ್ಲರು ನಿನ್ನಯ ಹಿರಿಯರು
ಹೆಸರನು ಗಳಿಸಿದ ಭಾರತ ಮಣಿಗಳು
ನೆನೆಯುತ ಅವರನು ಚಿಂತಿಸು ನೀನು || ೧೯೯ ||

ನಿಮ್ಮಯ ವಂಶದಿ ಹಿರಿಯಗೆ ಪಟ್ಟವು
ಪಾಲಿಸು ಅದನೇ ನೀನೂ ಕೂಡಾ
ಪಟ್ಟವನೇರುತ ರಾಜ್ಯವ ಪಾಲಿಸು
ವಂಶದ ಗೌರವ ಉಳಿಸುತ ನೀನೂ || ೨೦೦ ||

ತಂದೆಯು ತಾಯಿಯು ಗುರುಗಳು ಮೂವರು
ಪೂಜ್ಯರು ಅಲ್ಲವೆ ಪ್ರತಿಯೊಬ್ಬನಿಗೂ
ಗುರುಗಳ ಮಾತನು ತಾಯಿಯ ಮಾತನು
ಪಾಲಿಸಿ ಪಟ್ಟವ ಏರಿದರಾಗದೆ ? || ೨೦೧ ||

ಅಧರ್ಮವು ಅಲ್ಲ ತಿಳಿದಿರು ರಾಮನೆ
ಭರತನ ಮಾತನು ನಡೆಸಿದರಾಗಲೆ
ಧರ್ಮದ ಚ್ಯುತಿಯದು ಬರುವದು ಹೇಗೆ
ರಾಮನು ಹೇಳಿದ ಒಂದೇ ಮಾತನು || ೨೦೨ ||

ತಂದೆಯ ವಚನವ ಮುರಿಯೆನು ಎಂದೂ
ಉಳಿದುದು ಎಲ್ಲವು ಗೌಣವು ನಿಶ್ಚಯ
ಕೇಳುತ ಭರತನು ಆದನು ದುಃಖಿತ
ಎಂದನು ಸಾರಥಿ ಹರಡೆಲೊ ದರ್ಭೆಯ || ೨೦೩ ||

ಮಲಗುವೆ ಇಲ್ಲಿಯೆ ಅನ್ನವ ತೊರೆಯುತ
ಏಳೆನು ಎಂದಿಗು ರಾಮನು ಒಪ್ಪದೆ
ಕೇಳುತ ಸುಮಂತ ನಿಂತನು ಹಾಗೆಯೆ
ಭರತನೆ ಹರಡುತ ಮಲಗಿದ ಅದರಲಿ || ೨೦೪ ||

ಎನ್ನಯ ಮರಣದ ನಂತರ ಅಣ್ಣನೆ
ರಾಜ್ಯಕೆ ಹೋಗುತ ಆಳಲಿಬೇಕು
ಎನ್ನಯ ಜೀವನ ಸಾರ್ಥಕವಾಗಲು
ಅಸುವನು ಇಲ್ಲಿಯೆ ತೊರೆಯಲು ನಾನು || ೨೦೫ ||

ರಾಮನು ಅಂದನು ಕಂಬನಿ ತುಂಬುತ
ಮೆಚ್ಚಿನ ತಮ್ಮನೆ ಏಕಿದು ಹಟವು
ತಂದೆಯ ವಚನದ ಪಾಲನೆ ಮಾಡಲು
ಇರುವೆವು ಬದ್ಧರು ಇಬ್ಬರು ನಾವು || ೨೦೬ ||

ಜನತೆಯು ನಿಂತಿದೆ ನಿನ್ನನು ನೋಡುತ
ಕೇಳುತ ಅಂದನು ಭರತನು ಜನರಿಗೆ
ಏಕದು ನಿಂತಿರಿ ಸುಮ್ಮನೆ ಎಲ್ಲರು
ಹೇಳಿರಿ ನೀವೂ ಅಣ್ಣಗೆ ಬರಲು || ೨೦೭ ||

ಅಂದರು ಎಲ್ಲರು ರಾಮನೆ ಧರ್ಮವು
ವಚನವ ಮುರಿಯಲು ಆಗದು ಎಂದೂ
ರಾಮನು ಅಂದನು ಸಂತಸದಿಂದಲಿ
ಕೇಳೆಲೊ ಭರತನೆ ಜನತೆಯ ಮಾತನು || ೨೦೮ ||

ಏಳುತ ಈಗಲೆ ಶುದ್ಧನು ಆಗೆಲೊ
ಆಗಲೆ ಭರತನು ಏಳುತ ಅಂದನು
ಕೇಳಿರಿ ಎಲ್ಲರು ಋಷಿಗಳೆ ಪೌರರೆ
ರಾಜ್ಯವ ಎಂದೂ ಬೇಡಿಯೆ ಇಲ್ಲಾ || ೨೦೯ ||

ತಾಯಿಗೆ ಏನೂ ಹೇಳಿಯೆ ಇಲ್ಲಾ
ಅಣ್ಣನ ತ್ಯಾಗವ ಒಪ್ಪಿಯೂ ಇಲ್ಲಾ
ತಂದೆಯ ಮಾತನು ನಡೆಸುವದಾದರೆ
ಕಾಡಲಿ ಕಳೆಯುವೆ ನಾನೇ ಜೀವನ || ೨೧೦ ||

ಅಣ್ಣನು ಎನಗಿಹ ತಂದೆಗೆ ಸರಿಸಮ
ಅವನೇ ರಾಜ್ಯವ ಆಳುತ ಇರಲಿ
ನಾನೇ ಕಾಡಿನ ವಚನವ ಮುಗಿಸುವೆ
ಇದರಲಿ ಧರ್ಮದ ಚ್ಯುತಿಯೂ ಬಾರದು || ೨೧೧ ||

ಎಲ್ಲರ ಹೃದಯವು ತುಂಬುತ ಬಂದು
ಕಂಬನಿ ತೇಲಿತು ಕಣ್ಣಿನ ತುಂಬಾ
ರಾಮನು ಅಂದನು ಭರತ ಶ್ರೇಷ್ಠನೆ
ನಿನ್ನಯ ಹೃದಯವು ಚಿನ್ನವು ನಿಶ್ಚಿತ || ೨೧೨ ||

ಎನ್ನದು ಕಾಡಿನ ವಾಸವೆ ಧರ್ಮವು
ನಿನ್ನದು ರಾಜ್ಯದ ಪಾಲನೆ ಧರ್ಮವು
ತಿಳಿದಿರು ವಚನವ ಕೊಡುವೆನು ನಿನಗೆ
ಬರುವೆನು ನಿಶ್ಚಿತ ವನವಾಸ ಕಳೆದು || ೨೧೩ ||

ನಂತರ ಬರುತಲಿ ನಿನ್ನಯ ಜೊತೆಗೇ
ರಾಜ್ಯವ ಆಳುವೆ ಕೋಸಲ ದೇಶದ
ತಪ್ಪೆನು ಮಾತಿಗೆ ಏಳೆಲೊ ಇನ್ನು
ಎನ್ನುತ ಎತ್ತುತ ಅಪ್ಪಿದ ತಮ್ಮನ || ೨೧೪ ||

ನೆರೆದಿಹ ಋಷಿಗಳು ಪೌರರು ಎಲ್ಲರು
ಕಾಣುತ ಧರ್ಮದ ಮೂರ್ತಿಗಳಿಬ್ಬರ
ಎಂದೂ ಕಾಣದ ದೃಶ್ಯವ ನೋಡುತ
ಅಂದರು ಎಲ್ಲರು ಒಮ್ಮೆಲ್ ಭಲೆಭಲೆ || ೨೧೫ ||

ಅಣ್ಣನೆ ತಂದಿಹೆ ಚಿನ್ನದ ಪಾದುಕೆ
ಮೆಟ್ಟುತ ಅವುಗಳ ಕೊಡು ನೀ ಈಗಲೆ
ಇಡುತಲಿ ಪಾದುಕೆ ಪಟ್ಟದ ಮೇಲೆಯೆ
ಆಳುವೆ ರಾಜ್ಯವ ಪಾದುಕೆ ಸೇವಿಸಿ || ೨೧೬ ||

ಹದಿನಾಲ್ಕು ವರುಷ ತುಂಬಿದ ಮರುದಿನ
ಬಾರದೆ ಹೋದರೆ ಹಾರುವೆ ಬೆಂಕಿಗೆ
ಇರುವದು ಇದುವೇ ಎನ್ನಯ ಶಪಥವು
ತಿಳಿದಿರು ಮುರಿಯೆನು ಎಂದಿಗು ಶಪಥವ || ೨೧೭ ||

ಅಲ್ಲಿಯ ವರೆಗೂ ಇರುವೆನು ಹೀಗೆಯೆ
ಜಟೆಯನು ಧರಿಸುತ ಗಡ್ಡೆಯ ತಿನ್ನುತ
ನಾರನು ಉಡುತಲಿ ಮಲಗುವೆ ದರ್ಭದಿ
ತೊರೆಯುವೆ ಭೋಗಗಳೆಲ್ಲವ ನಾನೂ || ೨೧೮ ||

೨೨. ಭರತನು ಶ್ರೀರಾಮನ ಪಾದುಕೆ ಪಡೆದುದು

ಹೃದಯವು ಉಕ್ಕಿತು ಕಂಬನಿ ತುಂಬಿತು
ಪಾದುಕೆ ಮೆಟ್ಟುತ ಕೊಟ್ಟನು ಭರತಗೆ
ಭರತನು ಹೊತ್ತನು ಪಾದುಕೆ ತಲೆಯಲಿ
ಪ್ರದಕ್ಷಿಣೆ ಮಾಡುತ ರಾಮಗೆ ಭರತನು || ೨೧೯ ||

ಬರುತಲಿ ಆಶ್ರಮ ಹೊರಗಡೆ ಅವನು
ಇಟ್ಟನು ಪಟ್ಟದ ಆನೆಯು ಶಿರದಲಿ
ಪೌರರು ಎಲ್ಲರು ವಂದಿಸಿ ರಾಮಗೆ
ಹೊರಟರು ಹೊರಗಡೆ ಕಂಬನಿ ತುಂಬುತ || ೨೨೦ ||

ರಾಮನು ನಮಿಸಿದ ಗುರುಗಳ ಮುನಿಗಳ
ತಾಯಂದಿರೆಲ್ಲರ ಪಾದವ ಮುಟ್ಟಿ
ಬೇಡಿದ ಅಪ್ಪಣೆ ಆಶೀರ್ವಾದವ
ರಾಮನು ಹೇಳಿದ ಭರತಗೆ ಕೊನೆಗೆ || ೨೨೧ ||

ನಿನ್ನಯ ಜನನಿಯು ತಪ್ಪೇ ಇಲ್ಲಾ
ಸಿಟ್ಟನು ಬಿಡುತಲಿ ಪ್ರೀತಿಸು ಅವಳನು
ಹೇಳುತ ರಾಮನು ಸೇರಿದ ಆಶ್ರಮ
ಹೊರಟರು ಎಲ್ಲರು ಅಯೋಧ್ಯೆ ಕಡೆಗೆ || ೨೨೨ ||

ಭರತನು ಹೊರಟನು ಸೈನ್ಯದ ಸಹಿತ
ಬಂದನು ಹಾಗೆಯೆ ಭರದ್ವಾಜರಲಿ
ತಿಳಿಸಿದ ನಡೆದುದು ಎಲ್ಲವ ಅವರಿಗೆ
ಅಪ್ಪಣೆ ಪಡೆಯುತ ನಡೆದನು ಮುಂದಕೆ || ೨೨೩ ||

ತಲುಪಿದರೆಲ್ಲರು ಅಯೋಧ್ಯಾನಗರ
ಕಳೆಯೇ ಇಲ್ಲದ ನಗರವು ಇದ್ದಿತು
ಅಣ್ಣನು ಇಲ್ಲಾ ತಂದೆಯು ಇಲ್ಲಾ
ಊರಲಿ ಇರಲದು ಮನಸೇ ಇಲ್ಲಾ ॥ ೨೨೪ ॥

## ೨೩. ಭರತನು ನಂದೀಗ್ರಾಮಕೆ ಹೋದುದು

ಗುರುಗಳ ಕೇಳಿದ ಭರತನು ಆಗಲೆ
ಗುರುಗಳೆ ಹೋಗುವೆ ನಂದೀಗ್ರಾಮಕೆ
ಅಲ್ಲಿಯೆ ಪಾದುಕೆ ಇಡುವೆನು ಪಟ್ಟಕೆ
ಪಾದುಕೆ ಆಜ್ಞೆಯ ಪಾಲಿಪೆ ನಾನು ॥ ೨೨೫ ॥

ಜನನಿಯ ಬಿಟ್ಟನು ಅರಮನೆಯಲ್ಲಿಯೆ
ಅಪ್ಪಣೆ ಪಡೆಯುತ ಹೊರಟನು ಗ್ರಾಮಕೆ
ಪಟ್ಟದ ಮೇಲೆಯೆ ಇಟ್ಟನು ಪಾದುಕೆ
ಛತ್ರದ ಚಾಮರ ಗೌರವ ಅದಕೆ ॥ ೨೨೬ ॥

ಪಾದುಕೆಗಾಯಿತು ಪಟ್ಟಾಭಿಷೇಕ
ರಾಜ್ಯವು ಸಾಗಿತು ರಾಮನ ಹೆಸರಲಿ
ಭರತನು ನಡೆಸಿದ ತಾಪಸ ಜೀವನ
ಕಾಯುತ ಕುಳಿತನು ರಾಮನ ಬರವಿಗೆ ॥ ೨೨೭ ॥

## ೨೪. ಚಿತ್ರಕೂಟದಲ್ಲಿ ರಕ್ಕಸರ ಹಾವಳಿ

ಇತ್ತಲು ರಾಮನು ಅಲ್ಲಿಯೆ ಇದ್ದನು
ಚಿತ್ರಕೂಟವೋ ಒಗ್ಗಿದೆ ಅವನಿಗೆ
ಒಂದಿನ ಕಂಡನು ಋಷಿಗಳ ಗಡಿಬಿಡಿ
ಮಾಡುತಲಿದ್ದರು ಹೋಗುವ ಸಿದ್ಧತೆ ॥ ೨೨೮ ॥

ರಾಮನು ಕೇಳಿದ ಆಶ್ರಮ ಕುಲಪತಿ
ಋಷಿವರ ಕಾಣುವೆ ಋಷಿಗಳ ಗಡಿಬಿಡಿ
ಹೋಗುವ ಸಿದ್ಧತೆ ಕಾಣುತಲಿರುವುದು
ಇರುವುದೆ ದೋಷವು ಎನ್ನಯ ಕಡೆಯಿಂ || ೨೪೯ ||

ತಮ್ಮನ ಸೀತೆಯ ತಪ್ಪಿದು ಇದೆಯೇ
ಏಕಿದು ಹೋಗುವ ಸಿದ್ಧತೆ ಹೇಳಿರಿ
ಕುಲಪತಿ ಅಂದನು ರಾಮನೆ ಕೇಳು
ನಿಮ್ಮೊಳು ಯಾರದು ತಪ್ಪೇ ಇಲ್ಲವು || ೨೫೦ ||

ರಕ್ಕಸರಿಂದಲಿ ಕಿರುಕುಳ ಹೆಚ್ಚಿದೆ
ನಿನ್ನಯ ಬರವಿನ ಕಾರಣದಿಂದಲಿ
ರಕ್ಕಸ ಪುಂಡರು ಬರುತಲೆ ಇರುವರು
ರಾವಣನನುಜನು ಖರನೆಂದಿರುವನು || ೨೫೧ ||

ಅವನೋ ಕ್ರೂರಿಯು ನೀಚನು ದುಷ್ಟನು
ಇರುವನು ರಕ್ಕಸ ಜನಸ್ಥಾನದಲಿ
ಪೀಡಕನಿರುತಲಿ ಕಾಡುವ ಋಷಿಗಳ
ಹೆದರುತ ಎಲ್ಲರು ಹೋಗುತಲಿರುವರು || ೨೫೨ ||

ರಾಮನು ಹೇಳಿದ ಅಲ್ಲಿಯೆ ಇರಲು
ಆದರು ಕೇಳದೆ ಹೊರಟರು ಎಲ್ಲರು
ಕಳಿಸುತ ಎಲ್ಲರ ರಾಮನು ಬಂದನು
ಅಲ್ಲಿಯೆ ಇದ್ದನು ನಿರ್ಜನ ವನದಲಿ || ೨೫೩ ||

ಬೆಳಗಿಗೆ ಸಂಜೆಗೆ ಕಾಣನು ಯಾರನು
ಜನರನು ಕಾಣದೆ ಬಂದಿತು ಬೇಸರ
ಅಲ್ಲದೆ ನೆನಪದು ಉಳಿದಿತು ಮನದಲಿ
ಭರತನು ಬಂದುದು ಹೋದುದು ಎಲ್ಲವು || ೩೩೪ ||

ಭರತನ ಮಾತೂ ಜನತೆಯ ಮಾತು
ಗುರುಗಳ ವಚನವು ಅಲ್ಲದೆ ಎಲ್ಲವು
ಕಾಡುತ ಮನವನು ಕದಡುತ ಶಾಂತಿಯ
ನಡೆಯಿತು ಎಲ್ಲವು ಇಲ್ಲಿಯೆ ಅಲ್ಲವೆ || ೩೩೫ ||

## ೩೫. ಶ್ರೀರಾಮನು ಅತ್ರಿಋಷಿಗಳ ಆಶ್ರಮಕ್ಕೆ ಹೋದುದು

ಚಿಂತಿಸಿ ಅಂತೆಯೆ ಮರೆಯಲು ಎಲ್ಲವ
ಬಿಟ್ಟನು ಆಶ್ರಮ ಹೊರಟರು ಮೂವರು
ಮುಟ್ಟುತ ಆಶ್ರಮ ಅತ್ರಿಋಷಿಗಳದು
ಋಷಿಗಳು ಕರೆದರು ಪ್ರೀತಿಯ ತೋರುತ || ೩೩೬ ||

ಋಷಿಗಳು ಕರೆಯುತ ಸತಿ ಅನಸೂಯೆಯ
ಬಂದಿಹಳಿಲ್ಲಿಗೆ ಜಾನಕಿ ಈಗಲೆ
ಕರೆಯುತ ಅವಳನು ಫಲವನು ಕೊಡು ನೀ
ವೃದ್ಧಳು ತಾಪಸಿ ಅನಸೂಯೆ ಕಂಡು || ೩೩೭ ||

ಮೂವರು ಪಾದವ ಮುಟ್ಟುತ ವಂದಿಸಿ
ಕುಳಿತರು ಅಲ್ಲಿಯೆ ಆಶ್ರಮದೊಳಗೇ
ಅತ್ರಿಯು ಅಂದರು ಗೊತ್ತಿದೆ ರಾಮನೆ ?
ಹೆಸರಿಗೆ ಒಪ್ಪುವ ಅಸೂಯೆ ರಹಿತಳು || ೩೩೮ ||

## ೨೬. ಅನಸೂಯೆಯು ತಪಸ್ಸಿನ ಶಕ್ತಿ

ಬಂದಿತು ಒಮ್ಮೆಯೆ ಮಹಾಕ್ಷಾಮವು
ಮಳೆಯೇ ಇಲ್ಲವು ದಶವರ್ಷಗಳಲಿ
ಲೋಕವು ಸುಟ್ಟಿತು ಗಂಗೆಯು ಬತ್ತಿತು
ಅನಸೂಯೆ ಆಗ ತಪದಲಿ ನಿರತಳು || ೨೩೯ ||

ಸೃಜಿಸಿದಳಾಗಲೆ ಫಲಗಳ ಗಡ್ಡೆಯ
ಅಲ್ಲದೆ ಗಂಗೆಯ ತುಂಬಿಸಿ ಹರಿಸುತ
ಉಳಿಸಿದಳೆಷ್ಟೋ ಜನರನು ಪಶುಗಳ
ತಿಳಿದಿರು ಅವಳದು ತಾಪಸ ಜೀವನ || ೨೪೦ ||

ತಪವನು ಮಾಡುತ ಕಳೆದಿಹಳವಳು
ಹತ್ತುಸಾವಿರ ವರ್ಷಗಳಿಲ್ಲಿಯೆ
ವ್ರತವನು ಮುಗಿಸುತ ಚಾಂದ್ರಾಯಣಾದಿ
ಸೂರ್ಯನ ಉದಯವ ತಡೆದಳು ಒಮ್ಮೆ || ೨೪೧ ||

ಇರುವಳು ನಿಮಗೂ ತಾಯಿಯ ಸರಿಸಮ
ಕೇಳುತ ಎಲ್ಲವ ಅತ್ರೀ ಋಷಿಯಿಂ
ರಾಮನು ಕಳಿಸಿದ ಸೀತೆಯ ಒಳಗಡೆ
ಹರಸುತ ಅವಳನು ಅಂದಳು ಮಾತೆಯು || ೨೪೨ ||

ಕುವರಿಯೆ ಜಾನಕಿ ಭೋಗವ ತೊರೆಯುತ
ಬಂದುದು ಯೋಗ್ಯವು ಗಂಡನ ಸಂಗಡ
ಗಂಡನ ಜೊತೆಗೇ ಇರುವದು ಭಾಗ್ಯವು
ಗಂಡನೆ ಅಲ್ಲವೆ ಆರ್ಯೆಗೆ ದೇವರು || ೨೪೩ ||

ಸೀತೆಯೆ ಕೇಳೆಲೆ ಇರುವದು ತಪವದು
ಬೇಕಿರೆ ಯಾವದು ಕೊಡುವೆನು ಈಗಲೆ
ಸೀತೆಯು ಅಂದಳು ತೃಪ್ತಳು ಇರುವೆನು
ಬೇಡೆನು ಏನೂ ಬೇಕೇ ಇಲ್ಲವು || ೩೪೪ ||

ಕೇಳುತ ಮಾತನು ಸಂತಸ ಉಕ್ಕಿತು
ಆದರು ಕೊಟ್ಟಳು ಅಪೂರ್ವ ಪುಷ್ಪವ
ಬಾಡದು ಎಂದಿಗು ಶುಭವದು ನಿನಗೆ
ಅಲ್ಲದೆ ಕೊಟ್ಟಳು ವಸ್ತ್ರಾಭರಣವ || ೩೪೫ ||

ಕೇಳುತ ಕತೆಯನು ಸೀತೆಯ ಮದುವೆಯ
ಸಂತಸಬಟ್ಟಳು ಅನಸೂಯೆ ಮಾತೆ
ಅಂದಳು ಅವರಿಗೆ ಸಂಜೆಯು ಆಯಿತು
ಕಳೆಯಿರಿ ಇಲ್ಲಿಯೆ ರಾತ್ರಿಯ ಎಲ್ಲರು || ೩೪೬ ||

ಕಳೆದರು ರಾತ್ರಿಯ ಆಶ್ರಮದಲ್ಲಿಯೆ
ಬೆಳಗುತ ಅಪ್ಪಣೆ ಪಡೆಯುತ ಗುರುಗಳ
ಮಾತೆಯ ಪಾದಕೆ ಮಣಿಯುತ ಎಲ್ಲರು
ಹೊರಟರು ಸೇರಲು ದಂಡಕ ವನವನು || ೩೪೭ ||

-- ಅಯೋಧ್ಯಾಕಾಂಡ ಉತ್ತರಾರ್ಧ ಸಂಪೂರ್ಣ --

## ಲೇಖಕರ ಪರಿಚಯ :

ಶ್ರೀಮಾನ್ ತಾಳೀಕೋಟೆ ನಾರಾಯಣರಾಯರು ವಿದ್ಯಾರ್ಥಿಗಳಾಗಿದ್ದಾಗಲೇ ಸಾಧನಾಮುಖರಾದರು. ಭಾರತೀಯ ದರ್ಶನದಲ್ಲಿ ಆಸ್ಥೆ ಹೊಮ್ಮಿತು. ಅಂತರಂಗ ಬೆಳಗಿತು. ಚಿಕ್ಕ–ಪುಟ್ಟ ಕಥೆ–ಕವನಗಳನ್ನು ಬರೆದರು ಪೌರಾಣಿಕ ಪಾತ್ರಗಳ ವಿಶ್ಲೇಷಣಾತ್ಮಕ ಲೇಖನಗಳನ್ನು ಬರೆದರು. 'ಆರ್ಯ ಸ್ತ್ರೀ ಸೀತಾಮಾತೆ' 'ಯಾಜ್ಞವಲ್ಕ್ಯ' ಗಳು ನಿದರ್ಶನಗಳು. ೧೯೭೪ ರಲ್ಲಿ 'ರಾಗಿಣಿ' ಎಂಬ ಕವನಸಂಕಲನವು ಪ್ರಕಟವಾಯಿತು. ಓದುಗರು ಅಭಿನಂದಿಸಿದರು. ಐತಿಹಾಸಿಕ ಸಂಶೋಧನೆಯ ಫಲವಾಗಿ ' ಮಹಾಸತಿಕಲ್ಲು ' ಎಂಬ ಕಥನಕವನ ಬೆಳಕಿಗೆ ಬಂದಿತು. ಕಾವ್ಯಶ್ರೀ ವರ ನೀಡಿದಳು. 'ಬಭ್ರುವಾಹನ' ಎಂಬ ಮಕ್ಕಳ ಪುಸ್ತಕವು ಬಾಲಕರ ಬುದ್ಧಿಬಲ ಹೆಚ್ಚಿಸಲು ಕಾರಣವಾಯಿತು.

ಒಂದು ಬೆಳಗು. ಜೀವನದಲ್ಲಿ ದಿವ್ಯ ಕ್ಷಣ. ಶ್ರೀಮತ್ ಶಂಕರಾಚಾರ್ಯ ವಿರಚಿತ ಮೋಹಮುದ್ಗರದ ಅನುವಾದವು ಮೂಡಿಬಂತು. ಇವರು ಅಂತರ್ಮುಖಿಯಾದರು. ' ರಾಮಾಯಣಸುಧೆ ' ಇವರ ಲೆಕ್ಕಣಿಕೆಯಿಂದ ಹರಿಯಿತು. ಸಫಲರಾದರು. ವ್ಯಾಸಭಾರತದ ಸಾರಸರ್ವಸ್ವವನ್ನು ಕನ್ನಡಕ್ಕೆ ತರಲು ಪ್ರಯತ್ನಶೀಲರಾಗಿದ್ದಾರೆ. ಇವರ ಪ್ರಥಮ ಕಾಣಿಕೆ 'ಕನ್ನಡ ಭಗವದ್ಗೀತೆ'—ಈಗಾಗಲೇ ಪ್ರಕಟವಾಗಿದೆ.

' ಸುಕುಮಾರ ' ಎಂಬ ಕಾದಂಬರಿ ಬರೆದಿದ್ದಾರೆ. ಶ್ರೀ. ಶ್ರೀ ನಾರದಗಡ್ಡೆ ಚನ್ನಬಸವಸ್ವಾಮಿಗಳ ' ಪ್ರಣವನಾದ ' ಎಂಬ ವಚನ ಸಂಕಲನವನ್ನು ಇಂಗ್ಲೀಷಿನಲ್ಲಿ ' Vibrations of Om ' ಎಂದು ಅನುವಾದಿಸಿ, ಕನ್ನಡದ ಭೇರಿಯನ್ನು ನುಡಿಸಿದ್ದಾರೆ.

ಇಂದು ಪ್ರಕಟವಾಗುತ್ತಿರುವ ರಾಮಾಯಣದ ಪ್ರಥಮ ಸಂಪುಟವನ್ನು ಸ್ವಾಗತಿಸಿ ಇನ್ನುಳಿದ ಸಂಪುಟಗಳ ಶೀಘ್ರ ಪ್ರಕಾಶನಕ್ಕೆ ದೇವನಲ್ಲಿ ಪ್ರಾರ್ಥಿಸಿ, ಈ ಸಿದ್ಧಹಸ್ತ ಲೇಖಕರ ಚಿರಜೀವನಕ್ಕಾಗಿ ಕೋರುವೆ.

—ವ್ಹಿ. ಎಸ್. ಕಾಂತನವರ, ರಾಯಚೂರು.